# ಉಚ್ಚಂಗಿದುರ್ಗ
## (ಐತಿಹಾಸಿಕ ಹಾಗೂ ಸಾಂಸ್ಕೃತಿಕ ಅಧ್ಯಯನ)

ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್) ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪ್ರೌಢ ಪ್ರಬಂಧ.

ಸಂಶೋಧಕರು :
ಪ[illegible]ತ್ರೀಶ್

ಮಾರ್ಗದರ್ಶಕರು :
ಡಾ. ದೇವರಕೊಂಡಾರೆಡ್ಡಿ

ಶಾಸನ ಶಾಸ್ತ್ರ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೨೧

ಅಕ್ಟೋಬರ್ ೩೧, ೧೯೯೬

# ಉಚ್ಚಂಗಿದುರ್ಗ

## (ಐತಿಹಾಸಿಕ ಹಾಗೂ ಸಾಂಸ್ಕೃತಿಕ ಅಧ್ಯಯನ)

ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್.) ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪ್ರೌಢ ಪ್ರಬಂಧ.

ಸಂಶೋಧಕರು :
ಎಂ. ಕೊಟ್ರೇಶ್

ಮಾರ್ಗದರ್ಶಕರು :
ಡಾ. ದೇವರಕೊಂಡಾರೆಡ್ಡಿ



ಶಾಸನ ಶಾಸ್ತ್ರ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೨೧
ಅಕ್ಟೋಬರ್ ೩೧, ೧೯೯೬



# ಸಂಶೋಧಕರ ಪ್ರಮಾಣ ಪತ್ರ

"ಉಚ್ಚಂಗಿದುರ್ಗ-ಐತಿಹಾಸಿಕ ಹಾಗೂ ಸಾಂಸ್ಕೃತಿಕ ಅಧ್ಯಯನ" ಎಂಬ ಶೀರ್ಷಿಕೆಯ ಈ ಪ್ರಬಂಧವನ್ನು ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಒಪ್ಪಿಸಲು ಡಾ. ದೇವರ ಕೊಂಡಾರೆಡ್ಡಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ಅಧ್ಯಯನದ ವಿಷಯವನ್ನು ಇದುವರೆಗೆ ಯಾವ ಪದವಿಗೂ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.



M. Kotresh
ಎಂ. ಕೊಟ್ರೇಶ್
ಸಂಶೋಧನಾ ವಿದ್ಯಾರ್ಥಿ
ಶಾಸನ ಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ
೩೧.೧೦.೧೯೯೬

# ಮಾರ್ಗದರ್ಶಕರ ದೃಢೀಕರಣ ಪತ್ರ

ಶ್ರೀ ಎಂ. ಕೊಟ್ರೇಶ್ ಅವರು "ಉಚ್ಚಂಗಿದುರ್ಗ ಐತಿಹಾಸಿಕ ಹಾಗೂ ಸಾಂಸ್ಕೃತಿಕ ಅಧ್ಯಯನ" ಎಂಬ ಶೀರ್ಷಿಕೆಯ ಈ ಪ್ರೌಢ ಪ್ರಬಂಧವನ್ನು ೧೯೯೫-೯೬ರ ಶೈಕ್ಷಣಿಕ ವರ್ಷದ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಅರ್ಪಿಸಲೆಂದು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಈ ಪ್ರೌಢ ಪ್ರಬಂಧದ ವಿಷಯವನ್ನು ಇದುವರೆಗೆ ಯಾವ ಪದವಿಗೂ ಇವರು ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

(ಡಾ. ದೇವರ ಕೊಂಡಾರೆಡ್ಡಿ)
ಮುಖ್ಯಸ್ಥರು
ಶಾಸನ ಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ
೩೧.೧೦.೧೯೯೬

# ಕೃತಜ್ಞತೆಗಳು

ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್. ಅಧ್ಯಯನಕ್ಕೆ ಅವಕಾಶ ಕಲ್ಪಸಿಕೊಟ್ಟ ಮಾನ್ಯ ಕುಲಪತಿಗಳಾದ ಡಾ. ಚಂದ್ರಶೇಖರ ಕಂಬಾರ, ಮಾನ್ಯ ಕುಲಸಚಿವ ಅವರುಗಳಿಗೆ,

ಅಧ್ಯಯನ ಕ್ರಮವನ್ನು ಬೋಧಿಸಿ ಪ್ರೀತಿಯಿಂದ ಮಾರ್ಗದರ್ಶನ ನೀಡಿದ ಡಾ. ದೇವರ ಕೊಂಡಾರೆಡ್ಡಿ ಅವರಿಗೆ,

ಅಧ್ಯಯನದ ಅವಧಿಯಲ್ಲಿ ಪೂರಕವಾದ ಅಂಶಗಳನ್ನು ನೀಡಿದ ಪ್ರೊ. ಲಕ್ಷ್ಮಣ ತೆಲಗಾವಿ, ಡಾ. ಸುರೇಶ್ ಅವರುಗಳಿಗೆ,

ವಿವಿಧ ರೀತಿಯಲ್ಲಿ ಸಹಕರಿಸಿದ ಡಾ. ಸಿ. ಮಹದೇವ,ಕಲವೀರ ಮನ್ವಚಾರ್, ಡಾ. ಭಟ್‌ಸೂರಿ, ಡಾ. ವಾಸುದೇವನ್, ವಾಸುದೇವ ಬಡಿಗೇರ್, ಡಾ. ಟಿ.ಪಿ. ವಿಜಯ್, ಮೋಹನ್ ಕೃಷ್ಣರೈ, ಡಾ. ಬಾಲಸುಬ್ರಹ್ಮಣ್ಯ, ಡಾ. ಪುರುಷೋತ್ತಮ ಬಿಳಿಮಲೆ, ಚೆಲುವರಾಜು, ಜೆ. ರಮಾನಂದ, ಬಿ. ಶೇಷಾದ್ರಿ, ಮೊದಲಾದವರಿಗೆ,

ಮಾಹಿತಿ ಸಂಗ್ರಹಿಸುವ ಅವಧಿಯಲ್ಲಿ ಸಹಕರಿಸಿದ ಉಚ್ಚಂಗಿಯ ಕೆ. ಕರೀಗೌಡ, ಡಾ. ಚಿದಾನಂದ, ಮಧುಬಗರಿ, ಹೀ.ಮಾ. ಆದಿಶೇಷಗಿರಿ, ಬಸವರಾಜ, ಎಸ್.ವೈ. ಸೋಮಶೇಖರ, ಅಜಿತ್, ಕೇಶವ, ರಘು ಅವರುಗಳಿಗೆ,

ಅಧ್ಯಯನದ ಅವಧಿಯಲ್ಲಿ ನನ್ನೊಡನಿದ್ದು ಸಹಕರಿಸಿದ ಹಿರಿಯ ಮಿತ್ರರಾದ ವಿರೂಪಾಕ್ಷಿ, ವೀಣಾ, ಮಂಜುಳಾ, ಕೀರ್ತಿನಾಥ, ಶಿವು, ಮಠದ ಮತ್ತು ಎಂ.ಫಿಲ್. ಸ್ನೇಹಿತರುಗಳಿಗೆ,

ಅಚ್ಚುಕಟ್ಟಾಗಿ ಬೆರಳಚ್ಚು ಮಾಡಿಕೊಟ್ಟ ಸ್ನೇಹಿತ ರಾಜಶೇಖರ್ ಜಮದಂಡಿ ಅವರಿಗೆ,

*ತುಂಬು ಹೃದಯದ ಕೃತಜ್ಞತೆಗಳು*

*ಎಂ. ಕೊಟ್ರೇಶ್*
ಸಂಶೋಧಕ
ಶಾಸನ ಶಾಸ್ತ್ರ ವಿಭಾಗ

ವಿದ್ಯಾರಣ್ಯ
೩೧.೧೦.೧೯೯೭

## ಪರಿವಿಡಿ

----◦◦◦----

# ಅಧ್ಯಾಯ — ಒಂದು

## ಅಧ್ಯಯನದ ಅವಶ್ಯಕತೆ ಮತ್ತು ಉದ್ದೇಶ :

ಬಳ್ಳಾರಿ ಜಿಲ್ಲೆಯ ರಾಜಕೀಯ ಇತಿಹಾಸವನ್ನು ಅವಲೋಕಿಸಿದರೆ ವಿಜಯ-ನಗರ ಸಾಮ್ರಾಜ್ಯದ ಅವಧಿ ಮಧ್ಯಕಾಲೀನ ಚರಿತ್ರೆಯಲ್ಲಿ ನಿರ್ಣಾಯಕ ಕಾಲಘಟ್ಟವಾಗಿದೆಯೆನ್ನಬಹುದು. ಈ ಕುರಿತು ಪ್ರಾದೇಶಿಕ ಸಂಶೋಧನೆಗಳು ಸಾಕಷ್ಟು ನಡೆದಿದ್ದು, ಹೊಸ ಸಂಗತಿಗಳು ಬೆಳಕಿಗೆ ಬಂದಿವೆ. ವಿಜಯನಗರಕ್ಕಿಂತ ಮೊದಲು ಈ ಜಿಲ್ಲೆಯ ಉಚ್ಚಂಗಿದುರ್ಗವು ಬನವಾಸಿ ಕದಂಬರಿಗೆ,ಕಲ್ಯಾಣಿ ಚಾಲುಕ್ಯರಿಗೆ, ಪಾಂಡ್ಯರಿಗೆ, ಹೊಯ್ಸಳರಿಗೆ ಪ್ರಮುಖ ಕೇಂದ್ರವಾಗಿತ್ತು. ಅಲ್ಲದೆ ಬಳ್ಳಾರಿ, ಚಿತ್ರದುರ್ಗ, ಧಾರವಾಡ ಮತ್ತು ಕರ್ನಾಟಕದ ದಕ್ಷಿಣ ಭಾಗದ ಕೆಲವು ಪ್ರದೇಶಗಳನ್ನೊಳಗೊಂಡ ನೊಳಂಬವಾಡಿ ಮೂವತ್ತೆರಡು ಸಾವಿರಕ್ಕೆ ಉಚ್ಚಂಗಿದುರ್ಗವು ಪಾಂಡ್ಯರ ಕಾಲದಲ್ಲಿ ರಾಜಧಾನಿಯಾಗಿದ್ದಿತು. ಈ ಉಚ್ಚಂಗಿ ದುರ್ಗವು ವಿಜಯನಗರದ ನಂತರವೂ ಪಾಳೇಗಾರರ ಪ್ರಮುಖ ನೆಲೆಯಾಗಿರುವುದು ತಿಳಿದುಬರುತ್ತದೆ. ಒಂದು ಕಾಲಕ್ಕೆ ರಾಜಕೀಯ ಶಕ್ತಿ ಕೇಂದ್ರವಾಗಿದ್ದ ಉಚ್ಚಂಗಿದುರ್ಗವು ಸಾಂಸ್ಕೃತಿಕ ಹಾಗೂ ಧಾರ್ಮಿಕ ಕೇಂದ್ರವಾಗಿ ಬೆಳೆಯುತ್ತಿರುವ ಕಾರಣ ಇದರ ರಾಜಕೀಯ ಚರಿತ್ರೆ ಮುಸುಕಾಗುತ್ತದೆ.

ಒಂದು ಪ್ರದೇಶದಲ್ಲಿ ಸಂಸ್ಕೃತಿಯು ವಾಸಿಸುತ್ತಿರುವ ಒಂದು ಜನಾಂಗದ ಜೀವಾಳವಾಗಿರುತ್ತದೆ. ಈ ಸಂಸ್ಕೃತಿಯು ಅವರ ಕಲೆಗಳ, ಸಾಮಾಜಿಕ, ವ್ಯವಸ್ಥೆಯಲ್ಲಿ ಅವರ ಆಚಾರ ವ್ಯವಹಾರಗಳಲ್ಲಿ, ಧರ್ಮದಲ್ಲಿ ವ್ಯಕ್ತವಾಗುತ್ತದೆ. ಅಲ್ಲದೆ ಸಂಪ್ರದಾಯಗಳು, ಧಾರ್ಮಿಕ ಶ್ರದ್ಧೆಗಳು ಆ ಪ್ರದೇಶದ ಸಂಸ್ಕೃತಿಯ ಅಭಿವ್ಯಕ್ತಗಳು. ಈ ಹಿನ್ನೆಲೆಯಲ್ಲಿ ಉಚ್ಚಂಗಿದುರ್ಗದ ಸಾಂಸ್ಕೃತಿಕ ಅಧ್ಯಯನವು ಅಗತ್ಯವಾಗಿದೆ. ಪ್ರಾದೇಶಿಕ ಚರಿತ್ರೆಯ ಅಧ್ಯಯನದಲ್ಲಿ ಸ್ಥಳಪುರಾಣ, ದಂತಕಥೆ ಅವುಗಳನ್ನು ಪರೀಕ್ಷಿಸಲು ಮತ್ತು ಪ್ರತ್ಯೇಕಿಸಲು ಒಳ್ಳೆಯ ಅವಕಾಶಸಿಕ್ಕುತ್ತದೆ. ಆದ್ದರಿಂದ ಪ್ರಾದೇಶಿಕ ಚರಿತ್ರೆಗಳನ್ನು ಅಧ್ಯಯನದಲ್ಲಿ ವಿಶ್ಲೇಷಣೆ ಮಾಡಿ ಬರೆಯುವುದು ಅಗತ್ಯವೆನಿಸುತ್ತದೆ.

ಡಾ. ಸಿ.ಎಸ್.ಪಾಟೀಲರು ಉಚ್ಚಂಗಿದುರ್ಗದ ಕೋಟೆಯ ವಿಷಯವಾಗಿ (ದಿಕ್ಸೂಚಿ–1994) ಲೇಖನವನ್ನು ಪ್ರಕಟಿಸಿದ್ದಾರೆ. ಅಲ್ಲದೆ ಶನಿವಾರಸಿದ್ಧಿ, ಗಿರಿದುರ್ಗವುಲ್ಲ ಈ ಲೇಖನದ ಹಿನ್ನಲೆಯಲ್ಲಿ(ಇತಿಹಾಸದರ್ಶನ)ಸ್ವಲ್ಪ ರಾಜಕೀಯ ಪರಿಚಯವನ್ನು ಮಾಡುತ್ತಾ, ಕೋಟೆಯ ಮಹತ್ವದೊಂದಿಗೆ ಲೇಖನ ಪೂರ್ಣ ಗೊಳಿಸಿದ್ದಾರೆ. ಕುಂಬಾರ ಅವರು ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನದಲ್ಲಿ ಉಚ್ಚಂಗಿದುರ್ಗದ ಸ್ಥಳ ಪರಿಚಯ ಮತ್ತು ರಾಜಕೀಯದ ಸ್ವಲ್ಪ ವಿಷಯವನ್ನು 'ಉಚ್ಚಂಗಿದುರ್ಗ' ಎಂಬ ತುಂಡು ಲೇಖನ ಪ್ರಕಟಿಸಿದ್ದಾರೆ. ಶ್ರೀ ನಾಗರಾಜ ಹಾಗೂ ಕರೀಗೌಡರು ಉಚ್ಚಂಗಿದುರ್ಗದ ಅದಿದೇವತೆ ಉಚ್ಚಂಗೆಮ್ಮನ ಹಾಗೂ ಸ್ಥಳ ಪರಿಚಯದ ಕುರಿತಾಗಿ ಲೇಖನಗಳನ್ನು ಸ್ಥಳೀಯ ಪತ್ರಿಕೆಗಳಲ್ಲಿ ಪ್ರಕಟಿಸಿದ್ದಾರೆ. ಹೀಗೆ ಉಚ್ಚಂಗಿದುರ್ಗವನ್ನು ಕುರಿತಾಗಿ ಕೆಲವು ತುಂಡು ಲೇಖನಗಳನ್ನು ಬಿಟ್ಟರೆ ಉಚ್ಚಂಗಿದುರ್ಗದ ಇತಿಹಾಸದ ಬಗ್ಗೆ ಹಾಗೂ ಸಾಂಸ್ಕೃತಿಕತೆಯನ್ನು ಒಳಗೊಂಡ ಸಮಗ್ರ ಅಧ್ಯಯನ ನಡೆದಿಲ್ಲವೆನ್ನುವುದು ಗಮನಾರ್ಹ ಆದ್ದರಿಂದಲೇ ಈ ವಿಷಯವನ್ನು ಇಲ್ಲಿ ಕೈಗೆತ್ತಿಕೊಳ್ಳಲಾಗಿದೆ. ಈ ಮಸುಕಾಗುತ್ತಿರುವ ರಾಜಕೀಯ ಚರಿತ್ರೆಯ ಅಧ್ಯಯನ ನಡೆಸುವುದು ಅಗತ್ಯವಾಗಿದೆ.

ಉಚ್ಚಂಗಿ ದುರ್ಗದ ಐತಿಹಾಸಿಕ ಹಾಗೂ ಸಾಂಸ್ಕೃತಿಕ ಅಧ್ಯಯನದ ಹಿನ್ನಲೆಯಲ್ಲಿ ಉಚ್ಚಂಗಿದುರ್ಗದ ಪ್ರಾಚೀನತೆ, ವಿಭಿನ್ನ ರಾಜಮನೆತನಗಳಿಗೆ ಪ್ರಮುಖ ನೆಲೆಯಾಗಿ, ಉಚ್ಚಂಗಿದುರ್ಗದ ಉಚ್ಚಂಗೆಮ್ಮನ ಮೂಲ ಮತ್ತು ಆಕೆಯ ಹೆಸರಿನಲ್ಲಿ ನಡೆಯುವ ಹಬ್ಬ, ಬಲಿ ಮತ್ತು ಮುತ್ತು ಕಟ್ಟಿಸುವ ಪದ್ಧತಿ, ಅಲ್ಲಿಯ ಪರಿಸರದ ಜನಪದರ ಸಂಬಂಧಾತ್ಮಕತೆ ಇವುಗಳೊಂದಿಗೆ ಅಲ್ಲಿಯ ವಾಸ್ತು ಮತ್ತು ಮೂರ್ತಿಶಿಲ್ಪಗಳಂತಹ ಸಂಗತಿಗಳನ್ನು ಅಧ್ಯಯನ ಮಾಡಲು ಈ ಪ್ರೌಢ ಪ್ರಬಂಧದಲ್ಲಿ ಉದ್ದೇಶಿಸಲಾಗಿದೆ.

ನಮ್ಮ ಅಧ್ಯಯನದಲ್ಲಿ ಪ್ರಾಥಮಿಕ ಆಕರಗಳಾದ ಹಾಗೂ ಇದುವರೆಗೆ ಪ್ರಕಟ ಮತ್ತು ಅಪ್ರಕಟ ಶಾಸನಗಳಲ್ಲಿ ಬರುವ ಉಚ್ಚಂಗಿದುರ್ಗದ ಎಲ್ಲಾ ವಿವರಗಳನ್ನು ಓದಿ ಅರ್ಥೈಸಿಕೊಳ್ಳಲು ಪ್ರಯತ್ನಿಸಲಾಗಿದೆ. ಅಧ್ಯಯನಕ್ಕೆ ಅನುಕೂಲವಾಗುವಂತೆ ಶಾಸನದ ಪಾಠದಲ್ಲಿನ ವಿಷಯವನ್ನು ಮೂರು ಭಾಗಗಳ ಪಟ್ಟಿಯಲ್ಲಿ ಸಂಗ್ರಹಿಸಿದೆ . ಮಾಹಿತಿಯನ್ನು ಸಂಗ್ರಹಿಸುವಾಗ ಅನುಸರಿಸಿದ ಕ್ರಮ ಹೀಗಿದೆ.

ಮೊದಲನೆಯ ಕಾಗದದ ಪಟ್ಟಿಕೆಯಲ್ಲಿ ಯಾವ ರಾಜರು ಎಲ್ಲಿಂದ ಎಲ್ಲಿಯ ವರೆಗೆ, ಯಾವ ಸಾಮಂತರಾಗಿದ್ದರು ಎಂಬ ವಿವರವಿದೆ. ಎರಡನೆಯ ಪಟ್ಟಿಕೆಯಲ್ಲಿ ದೇವಾಲಯಗಳನ್ನು ಕಟ್ಟಿಸಿದವರು, ಗಡಿಭಾಗಗಳು ಮತ್ತು ಆತನಿಗಿದ್ದ ಬಿರುದುಗಳ ವಿವರವಿದೆ. ಮೂರನೆಯ ಪಟ್ಟಿಕೆಯಲ್ಲಿ ಸ್ಥಳನಾಮಗಳು, ದಾನ ದತ್ತಿಯ ವಿವರಗಳನ್ನು ದಾಖಲಿಸಿಕೊಳ್ಳಲಾಗಿದೆ. ನಂತರ ಅವುಗಳ ಕಾಲಾನುಕ್ರಮದ ಜೋಡಣೆ ನಡೆಯಿತು. ಆನುಶಂಗಿಕ ಆಕರಗಳಾದ ಮತ್ತು ವಿಷಯದ ಸಮಕಾಲೀನತೆಗೆ ಸಂಬಂಧಿಸಿದ ಸಂಶೋಧನಾ ಗ್ರಂಥಗಳ, ಲೇಖನಗಳಿಂದ ಮಾಹಿತಿಯನ್ನು ಬೇರೆ ಪಟ್ಟಿಕೆಯಲ್ಲಿ ಸಂಗ್ರಹಿಸಲಾಯಿತು. ಆನಂತರ ಈ ಎಲ್ಲಾ ಮಾಹಿತಿಗಳನ್ನು ವರ್ಗೀಕರಣ ಮಾಡಿ ಅವುಗಳಿಗೆ ಒಂದು ಸ್ಪಷ್ಟ ರೂಪವನ್ನು ಕೊಡುವ ಪ್ರಯತ್ನ ಮಾಡಿದೆ.

ಉಚ್ಚಂಗಿದುರ್ಗ ಪರಿಸರದಲ್ಲಿನ ಶಾಸನಗಳ, ದೇವಾಲಯಗಳ, ಮತ್ತು, ಕೋಟೆಯ ಸ್ಥಳ ನಿರ್ದೇಶನವನ್ನು ಗುರುತಿಸುವದಕ್ಕಾಗಿ ಹಾಗೂ ಕ್ಷೇತ್ರದ ಪರಿವೀಕ್ಷಣೆಯ ಕಾರ್ಯಕ್ಕಾಗಿ ಪ್ರಸ್ತುತ ಅಧ್ಯಯನದ ಪ್ರದೇಶವಾದ ಉಚ್ಚಂಗಿದುರ್ಗ ಮತ್ತು ಅದರ ಸುತ್ತ ಮುತ್ತಲೂ ಪ್ರವಾಸವನ್ನು ಮಾಡಲಾಯಿತು. ಈ ಸಮಯದಲ್ಲಿ ಸಹಭಾಗಿ ಅಧ್ಯಯನದ ವಿಧಾನವನ್ನು ಅಳವಡಿಸಿಕೊಂಡು ಉಚ್ಚಂಗಿದುರ್ಗ ಪೂರ್ವೇತಿಹಾಸದ ಬಗ್ಗೆ , ಉಚ್ಚಂಗೆಮ್ಮನ ವಿವರವಾಗಿ ಸ್ಥಳೀಯರಿಂದ ಮಾಹಿತಿಯನ್ನು ಸಂಗ್ರಹಿಸುವ ಪ್ರಯತ್ನ ನಡೆಯಿತು. ಅಲ್ಲದೆ ವಿಶೇಷವಾದ ಕೋಟೆ, ಬಾವಿ, ಮೂರ್ತಿಗಳ ದೇವಾಲಯಗಳ , ಮತ್ತು ಶಾಸನಗಳ ಛಾಯ ಚಿತ್ರಗಳನ್ನು ಸಹ ತೆಗೆದುಕೊಳ್ಳಲಾಗಿದೆ. ಹೀಗೆ ಕ್ಷೇತ್ರಕಾರ್ಯ ಮಾಡಿದಾಗ ಗುರುತಿಸಿಕೊಂಡ ಕೆಲ ಅಂಶಗಳನ್ನು [illegible] ಬಿಡಲಾಗಿದೆ. ಕಾರಣ ಪ್ರಸ್ತುತ ಎಂ.ಫಿಲ್ ಅಧ್ಯಯನದ ಪ್ರೌಢ ಪ್ರಬಂಧವನ್ನು ಅಲ್ಪ ಕಾಲಾವಧಿಯಲ್ಲಿ ಒಪ್ಪಿಸಬೇಕಾದ ತುರ್ತು ಇದ್ದುದರಿಂದ ಕೆಲವಂಶಗಳ ಬಗ್ಗೆ ಹೆಚ್ಚಿನ ಗಮನ ಹರಿಸಲು ಸಾಧ್ಯವಾಗಿಲ್ಲ.

# ಅಧ್ಯಾಯ — ಎರಡು

## ಉಚ್ಚಂಗಿ ದುರ್ಗದ ಸ್ಥಳ ಪರಿಚಯ :

ಉಚ್ಚಂಗಿದುರ್ಗವು ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ ತಾಲೂಕಿನಲ್ಲಿದ್ದು, ಹರಪನ ಹಳ್ಳಿಯ ದಕ್ಷಿಣಕ್ಕೆ 28 ಕಿ.ಮೀ.ದೂರದಲ್ಲಿದೆ. ದಾವಣಗೇರಿಯಿಂದಲೂ ಇದು 28 ಕಿ.ಮಿ.ಅಂತರದಲ್ಲಿಯೇ ಇದೆ. ಹರಪನಹಳ್ಳಿಯಿಂದ ಉಚ್ಚಂಗಿದುರ್ಗಕ್ಕೆ ಹೋಗುವಾಗ ಮಳೆಗಾಲದ ಬೆಳೆಗಳಾದ ಜೋಳ, ರಾಗಿ , ಸಜ್ಜೆ, ಮೆಕ್ಕೆಜೋಳ ಹೀಗೆ 'ಏಕದಳ ಧಾನ್ಯಗಳು ಕಂಡುಬರುತ್ತವೆ. ಅಲ್ಲದೆ ದ್ವಿದಳ ಧಾನ್ಯಗಳಾದ ತೊಗರಿ, ಮಡಿಕೆ, ಹೆಸರು ಹಾಗೂ ಎಣ್ಣೆ ಕಾಳುಗಳಾದ ಶೇಂಗಾ, ಸೂರ್ಯಕಾಂತಿ ಮತ್ತು ವಾಣಿಜ್ಯ ಬೆಳೆಗಳಾದ ಹತ್ತಿ ದಾರಿಯುದ್ದಕ್ಕೂ ಕಂಡುಬರುವುವು. ಇದೇ ವಿಧವಾದ ಬೆಳೆಗಳನ್ನು ಉಚ್ಚಂಗಿದುರ್ಗ ಮತ್ತು ಸುತ್ತ ಮುತ್ತಲಿನ ಪರಿಸರದಲ್ಲಿ ಕಾಣಬಹುದಾಗಿದೆ.

ದಾವಣಗೇರಿ ಮತ್ತು ಉಚ್ಚಂಗಿದುರ್ಗದ ಮಾರ್ಗ ಮಧ್ಯದಲ್ಲಿ ಆಣಜಿ ಇದೆ. ಮಾರ್ಗದುದ್ದಕ್ಕೂ ಅಲ್ಲಲ್ಲಿ ನೀರಾವರಿ ಸೌಕರ್ಯ ಇರುವುದರಿಂದ ಭತ್ತ,ಕಬ್ಬಿನ ಬೆಳೆಗಳನ್ನು ವಿಶೇಷವಾಗಿ ಬೆಳೆಯುತ್ತಾರೆ. ಸದಾ ನೀರಿನ ಸೌಕರ್ಯವಿರುವುದರಿಂದ ಒಂದಕ್ಕಿಂತ ಹೆಚ್ಚು ಬೆಳೆ ಬೆಳೆಸಲು ಅನುಕೂಲವಾಗಿದೆ. ಹೀಗೆ ಉಚ್ಚಂಗಿದುರ್ಗವು ವಿವಿಧ ವ್ಯವಸಾಯಗಳ ಮಧ್ಯೆ ಇರುವುದು ಕಂಡುಬರುತ್ತದೆ. ಉಚ್ಚಂಗಿದುರ್ಗದ ಪಶ್ಚಿಮ ದಿಕ್ಕಿನ ಮ್ಯಾಗಳ ಗೇರಿಯಿಂದ ಉಚ್ಚಂಗಿದುರ್ಗವು ಸು. 3 ಕಿ.ಮೀ.ದೂರದಲ್ಲಿದೆ ಈ ಭಾಗದಲ್ಲಿಯೂ ಸ್ವಲ್ಪ ನೀರಿನ ಸೌಲಭ್ಯವಿರುವುದರಿಂದ ನೀರಾವರಿ ಬೆಳೆಗಳನ್ನು ಬೆಳೆಯುತ್ತಾರೆ. ಈ ಪಶ್ಚಿಮ ಪ್ರದೇಶದಲ್ಲಿ ಕರಡೀಗುಡ್ಡ, ಹಾಲಮ್ಮನ ತೋಪುಗಳಿವೆ.

ಉಚ್ಚಂಗಿದುರ್ಗದ ಪೂರ್ವ ದಿಕ್ಕಿನಲ್ಲಿ ಆಣಜಿಗೆರೆ, ಮಾದಿಹಳ್ಳಿ, ಗುಡಿಗುಡಾಳ ಇತ್ಯಾದಿ ಊರುಗಳಿವೆ. ಉಚ್ಚಂಗಿದುರ್ಗದ ಸುತ್ತಲೂ ಫಲವತ್ತಾದ ಭೂಮಿಯಿದೆ. ಮರಳು ಮಿಶ್ರಿತ ಕೆಂಪು ಮಣ್ಣು ಪ್ರಮುಖವಾಗಿದ್ದರೆ, ಅಲ್ಲಲ್ಲಿ ಕಪ್ಪು ಮಿಶ್ರಿತ ಮತ್ತು ಬೂದಿ(ಹಾಳು) ಮಣ್ಣು ಕಂಡುಬರುತ್ತದೆ. ಉಚ್ಚಂಗಿದುರ್ಗದ ಆಗ್ನೇಯ ಭಾಗಕ್ಕೆ ಹಳೆಯ ಊರಿದ್ದ ಅವಶೇಷಗಳಾದ ಬೂದಿ ಮಣ್ಣಿನ ದಿಬ್ಬಗಳು ಕೆಂಪು ಮತ್ತು ಕಂದು ಬಣ್ಣದ ಸವೆದಿರುವ ಮಡಿಕೆ ಚೂರುಗಳು ಕಂಡುಬರುವುವು. ಇದೇ ತರಹದ ಅವಶೇಷಗಳನ್ನು

ಉಚ್ಚಂಗಿದುರ್ಗದ ಕೋಟೆಯ ಮಧ್ಯಭಾಗದ ಪ್ರದೇಶದಲ್ಲಿ ಕಾಣಬಹುದಾಗಿದೆ. ಈ ಪರಿಸರದಲ್ಲಿ ಸಿಕ್ಕ ಶಾಸನದಲ್ಲಿ ಹಿಡಂಬವನ, ಹಿಡಂಬೇಶ್ವರ, ಮತ್ತು ಮೆಟ್ಟಿನಾಡು[1] ಇತ್ಯಾದಿ ಹೆಸರುಗಳು ತಿಳಿದುಬರುತ್ತವೆ. ಇಲ್ಲಿ 11 ಮತ್ತು 12 ನೇ ಶತಮಾನಕ್ಕೆ ಸೇರಬಹುದಾದ ಶಾಸನಗಳು[2] ದೇವಾಲಯದ ಅವಶೇಷಗಳು ಕಂಡುಬರುವುದರಿಂದ ಇದು ಪ್ರಾಚೀನ ಕಾಲದಲ್ಲಿ ಮಾನವನ ವಾಸ ಸ್ಥಾನವೂ ಆಗಿದ್ದಿರಬಹುದಾಗಿದ್ದು. ಇಂದಿನ ಉಚ್ಚಂಗಿ ಊರಿನ ಮೂಲವು ಇದೇ ಆಗಿತ್ತೆಂದು ಊಹಿಸಲವಕಾಶವಿದೆ. ಈ ಪ್ರದೇಶದ ಹಿಂಭಾಗದಲ್ಲಿ ಅರಸನ ಬಾವಿ ಇದೆ. ಈ ಬಾವಿಯಿಂದ ಬಲ ಮೂಲೆಗೆ ಬನಶಂಕರಿಯ ದೇವಾಲಯವು ಇದ್ದು ಇದರ ಈಶಾನ್ಯ ದಿಕ್ಕಿಗೆ ಎರಡು ಸಮಾಧಿ ಕಟ್ಟಡಗಳಿವೆ. ಬನಶಂಕರಿ ದೇವಾಲಯದಿಂದ ದಕ್ಷಿಣ ಭಾಗಕ್ಕೆ ಕೆಳಕೋಟೆ ಆಂಜನೇಯ, ಬಸವಣ್ಣ ಮತ್ತು ವೀರಭದ್ರ ದೇವಾಲಯಗಳಿವೆ. ಈ ವೀರಭದ್ರ ದೇವಾಲಯದ ಹಿಂಬದಿಯಿಂದ ಉತ್ತರಕ್ಕೆ ಇಂದಿನ ಉಚ್ಚಂಗಿದುರ್ಗವಿದ್ದು, ಈ ದೇವಾಲಯದ ಪೂರ್ವಕ್ಕೆ ಅರ್ಧ ಕಿ.ಮೀ. ಮುಂದೆ ಹಾಲಮ್ಮನ ದೇವಾಲಯವಿದೆ. ಅಲ್ಲಿಂದ ಸು. 1 ಕಿ.ಮೀ. ಆಗ್ನೇಯ ಭಾಗಕ್ಕೆ ತವಕ್ಲೇಶ್ವರ ದೇವಾಲಯವಿದ್ದು, ಈ ದೇವಾಲಯದಿಂದ ನೈರುತ್ಯ ಭಾಗಕ್ಕೆ ಸು. 100 ಮೀ. ಅಂತರದಲ್ಲಿ ಶಿಲಾಶಾಸನ ಮತ್ತು ಅದರ ಸಮೀಪ ದೇವಾಲಯದ ಅವಶೇಷಗಳು ಕಂಡುಬರುತ್ತವೆ.

ಈ ಭಾಗದಿಂದ ಆಗ್ನೇಯಕ್ಕೆ ಸು. 50 ಮೀ. ದೂರದಲ್ಲಿ ಬಡಗಿಮಟ್ಟಿ ಇದೆ. ಇದು ಪ್ರಾಚೀನವಾದ ಪ್ರದೇಶವೆಂದು ಇಲ್ಲಿಯ ಶಾಸನದಿಂದ ತಿಳಿದುಬರುತ್ತದೆ.[3] ಈ ಪ್ರದೇಶದಿಂದ ಪಶ್ಚಿಮಕ್ಕೆ ಸು. 200 ಮೀ ದೂರದಲ್ಲಿ ಸುಂದರ ಕೆತ್ತನೆಯ ಹೊಯ್ಸಳರ ಕಾಲದ ದೇವಾಲಯವಿದೆ.[4] ಇದು ನೊಣ್ಣೇಶ್ವರ ದೇವಾಲಯವೆಂದು ಸ್ಥಳೀಯರು ಕರೆಯುತ್ತಾರೆ. ಇಲ್ಲಿಂದ ಪಶ್ಚಿಮಕ್ಕೆ ಸು. 50 ಮೀ ದೂರದಲ್ಲಿ ಸೀಗೆಹೊಂಡವಿದೆ. ಇದಕ್ಕೆ ಚಿಕ್ಕಹೊಂಡವೆಂತಲೂ ಕರೆಯುವುದುಂಟು. ಇದು ಪ್ರಾಚೀನ ಕಾಲದಿಂದಲೂ ಇದ್ದಿರಬಹುದಾಗಿದೆ. ಈ ಹೊಂಡದ ಉತ್ತರಕ್ಕೆ ಜೈನ ತೀರ್ಥಂಕರನ ವಿಗ್ರಹವನ್ನೊಳಗೊಂಡ ದೇವಾಲಯವಿದೆ. ಇದಕ್ಕೆ ಜಿನಪ್ಪನ ದೇವಾಲಯವೆಂತಲೂ ಕರೆಯುತ್ತಾರೆ. ಬಹುಶ: ಈ ಪ್ರದೇಶವನ್ನಾಳಿದವರಲ್ಲಿ ಜೈನಧರ್ಮ ಅವಲಂಬಿ ದೊರೆಗಳು ಇರಬಹುದಾಗಿದೆ. ಈ ದೇವಾಲಯದ ಉತ್ತರಕ್ಕೆ ಸು. 25 ಅಡಿ ಸಂತರದಲ್ಲಿ ಶಿವ ದೇವಾಲಯವಿದೆ, ಇದಕ್ಕೆ ಶಾಸನದಲ್ಲಿ ಗಳಗೇಶ್ವರ ದೇವಾಲಯವೆಂದು ಕರೆದಿದೆ.[5]

ಇಲ್ಲಿಂದ ಉತ್ತರಕ್ಕೆ ಕಲ್ಲುಗಳಿಂದ ಜೋಡಿಸಲ್ಪಟ್ಟ ಅಗಲವಾದ ದಾರಿಯು ಮುಂದೆ ಕವಲೊಡೆಯಲ್ಪಟ್ಟು ಕೋಟೆಯೊಳಗಿನ ಊರಿನೊಳಕ್ಕೆ ಒಂದು, ಮತ್ತೊಂದು ಬೆಟ್ಟದ ಕೆಳಗಿನ ಊರಿಗೆ ಹೋಗುತ್ತದೆ. ಬಹುಶಃ ಈ ದಾರಿ ತುಂಬಾ ಹಳೆಯದಾಗಿರಬೇಕು. ಈ ಶಿವ ದೇವಾಲಯದ ಪಶ್ಚಿಮಕ್ಕೆ ಸು. 300 ಮೀ. ದೂರದಲ್ಲಿ ಹಿರೇಹೊಂಡವಿದೆ. ಶಾಸನದಲ್ಲಿ ಇದಕ್ಕೆ ಕೆರೆ ಎಂದು ಕರೆದಿದೆ.[6] ಮತ್ತು ಇದರ ಪೂರ್ವದ ಕೆಳಭಾಗದಲ್ಲಿ ತೋಟವಿದ್ದು ಅಲ್ಲಿಯ ಹತ್ತಿರದಲ್ಲಿ ಮಠವೊಂದಕ್ಕೆ ದಾನಬಿಟ್ಟ ಉಲ್ಲೇಖವು ಬರುತ್ತದೆ. ಅಂದರೆ ಉಚ್ಚಂಗಿಯ ಹಳೆಯ ಊರಿನ ವ್ಯಾಪ್ತಿ ಇಲ್ಲಿಯವರೆಗೂ ಹಬ್ಬಿರಬಹುದಾಗಿದೆ. ಈ ಹಿರೇಹೊಂಡದಿಂದ ಪಶ್ಚಿಮಕ್ಕೆ 100 ಮೀ. ದೂರದಲ್ಲಿ ಸಮಾಧಿಗಳು ಕಂಡುಬರುತ್ತವೆ. ಈ ಉಚ್ಚಂಗಿ ಕೋಟೆಯ ಆರಂಭಾಗವಾಗಿದ್ದು ಅಲ್ಲಿಯೇ ಹರಿಹರದ ಬಾಗಿಲಿದೆ. ಇಲ್ಲಿಂದ ನೈರುತ್ಯಕ್ಕೆ ಕಲ್ಲುಗಳಿಂದ ಜೋಡಿಸಲ್ಪಟ್ಟ ದಾರಿ ಮುಂದಕ್ಕೆ ಸು. 100 ಮೀ. ಹೋಗಿ ಕತ್ತರಿಸಿದೆ. ಆದರೂ ಮುಂದುವರೆಯಲು ದಾರಿಯ ಗುರುತುಗಳಿವೆ. ಈ ದಾರಿ ಕರಡಿದುರ್ಗಕ್ಕೆ ಹೋಗುತ್ತದೆ. ಇಲ್ಲಿ ಕರಡಿದುರ್ಗಕ್ಕೂ ಉಚ್ಚಂಗಿದುರ್ಗಕ್ಕೂ ಬಿಡಿಸಲಾಗದ ಸಂಬಂಧವಿತ್ತೆಂದರೆ ತಪ್ಪಾಗಲಾರದು. ಹಿರೇಹೊಂಡದಿಂದ ಉತ್ತರ ದಿಕ್ಕಿಗೆ ಕಲ್ಲುಗಳಿಂದ ಜೋಡಿಸಲ್ಪಟ್ಟ ದಾರಿ ಕೋಟೆಯೊಳಕ್ಕೆ ಹೋಗುತ್ತದೆ. ಈ ದಾರಿಗೆ ಹಾಕಿದ ಕಲ್ಲುಗಳು ತುಂಬಾ ಸವೆದುಹೋಗಿವೆ. ಆದ್ದರಿಂದ ಇದು ಬಹು ಹಿಂದಿನಿಂದಲೂ ಇದ್ದಿರಬಹುದಾದ ದಾರಿಯೆಂದು ಊಹಿಸಬಹುದಾಗಿದೆ.

ಈ ದಾರಿಯು ಹಿರೇ ಹೊಂಡದಿಂದ ಕೋಟೆಯೊಳಗೆ ಬಂದು ಮುಂದೆ ಕಾಣುವುದಿಲ್ಲ. ಇಲ್ಲಿಂದ ಈಶಾನ್ಯ ದಿಕ್ಕಿಗೆ ಸು. 200 ಮೀ. ದೂರದಲ್ಲಿ ಕೋಟೆಯೊಳಗಿನ ಊರಿದೆ. ಇಲ್ಲಿ ಸು. 250 ಮನೆಗಳಿದ್ದು ಪ್ರಾಥಮಿಕ ಶಾಲೆಯಿದೆ. ಇಲ್ಲಿ ಬಹುಪಾಲು (ವಾಲ್ಮೀಕಿ)ನಾಯಕ ಜನಾಂಗದವರೇ ಇದ್ದಾರೆ. ಇಲ್ಲಿರುವ ಕೆಲವು ಮನೆಗಳು ವಿಜಯನಗರೋತ್ತರದಲ್ಲಿಯೇ ನಿರ್ಮಾಣಗೊಂಡಂತೆ ಗೋಚರಿಸುತ್ತವೆ. ಪಾಳೇಗಾರ '' ನಾಯಕ ಜನಾಂಗಕ್ಕೂ '' ಈ ಊರಿಗೂ ಏನೋ ಸಂಬಂಧವಿದ್ದಿರಬಹುದೆಂದರೆ ತಪ್ಪಾಗಲಾರದು. ಇಲ್ಲಿ ಬಹುತೇಕ ಕೃಷಿಕರಾಗಿದ್ದಾರೆ. ಕೋಟೆಯೊಳಗಿನ ಊರಿನ ಈಶಾನ್ಯ ದಿಕ್ಕಿಗೆ ಸು. 200 ಮೀ. ದೂರದಲ್ಲಿ ಕೋಟೆ ಮಹಾದ್ವಾರವಿದೆ. ಇಲ್ಲಿಂದ ದಕ್ಷಿಣಕ್ಕೆ ಸು. 50 ಅಡಿ ಅಂ ದಲ್ಲಿಯೇ ಕೋಟೆಯ ಇನ್ನೊಂದು ಬಾಗಿಲಿದೆ. ಇದರ ಹಿಂಬದಿಯ ದಾರಿಯೊಂದು ದಕ್ಷಿಣ ದಿಕ್ಕಿಗೆ ಮುಂದುವರೆದು

ಸ್ವಲ್ಪ ದೂರದಲ್ಲಿಯೇ ಪಶ್ಚಿಮ ದಿಕ್ಕಿಗೆ ತಿರುಗುತ್ತದೆ. ಈ ದಾರಿಯು ಕಲ್ಲಿನಿಂದ ಜೋಡಿಸಲ್ಪಟ್ಟಿದ್ದು ಕಲ್ಲುಗಳು ಸವೆದಿವೆ. ಇದು ಕೋಟೆಯ ಮಹಾದ್ವಾರದಿಂದ ಉತ್ತರಕ್ಕೆ ಸು. 100 ಮಿ. ಮುಂದೆ ಹೋಗಿ ಕವಲೊಡೆದು ಬೆಟ್ಟದ ಕೆಳಗಿನ ಊರಿನೊಳಕ್ಕೆ ಹೋಗುತ್ತದೆ. ಮಹಾದ್ವಾರದಿಂದ ದಕ್ಷಿಣಕ್ಕೆ ಬಂದು ಪಶ್ಚಿಮಕ್ಕೆ ತಿರುಗುವಾಗ ಎರಡೂ ಪಾರ್ಶ್ವಗಳಲ್ಲಿ ಎತ್ತರವಾದ ಗೋಡೆಗಳಿವೆ. ಇಲ್ಲಿಯೆ ಎಡಭಾಗಕ್ಕೊಂದು ಕೋಟೆಯ ದಿಡ್ಡಿ ಬಾಗಿಲಿದೆ. ಇಲ್ಲಿಂದ ದಕ್ಷಿಣಕ್ಕೆ ಸ್ವಲ್ಪ ಅಂತರದಲ್ಲಿಯೇ ಕೋಷ್ಟದ ಎಲ್ಲಮ್ಮನೆಂದು ಕರೆಯಲ್ಪಡುವ ದೇವಾಲಯವಿದೆ. ದಿಡ್ಡಿ ಬಾಗಿಲಿನಿಂದ ಪಶ್ಚಿಮಕ್ಕೆ 3ನೇ ಬಾಗಿಲಿದ್ದು ಇದು ತುಂಬ ಅಗಲವಾಗಿದೆ. ಈ 3ನೇ ಬಾಗಿಲಿನಿಂದ ಉತ್ತರಕ್ಕೆ ಸು. 50 ಮೀ. ದೂರದಲ್ಲಿ ಮರಗಳ ತೋಪಿದೆ. ಇಲ್ಲಿಗೆ ಉತ್ಸವಾಂಭ ಬನ್ನಿ ಮುಡಿಯಲು ಮರದ ಹತ್ತಿರ ಬರುತ್ತಾಳೆ. ಇದರ ಹಿಂಭಾಗದಲ್ಲಿ ರುವುದೇ ಹೊನ್ನಮ್ಮ ನಾಗತಿಹೊಂಡ. ಇದರ ಉತ್ತರಕ್ಕೆ ಅಂಟಿಕೊಂಡಿರುವ ಕಲ್ಲು ಬಂಡೆಯೇ ಹೊನ್ನೆ ರಳುರಿ ಹೊನ್ನಮ್ಮನಾಗತಿಯು , ಸಾವಿನಿಂದಾಗಿ ಹೊನ್ನೆ ರಳುರಿ ಮತ್ತು ಹೊನ್ನೆಹೊಂಡವೆಂದು ಹೆಸರು ಬಂದವೆಂದು ಸ್ಥಳೀಯರು ಅಭಿಪ್ರಾಯ ಪಡುತ್ತಾರೆ. ಇಲ್ಲಿಂದ ದಕ್ಷಿಣಕ್ಕೆ ಸು. 100 ಮೀ. ಅಂತರದಲ್ಲಿ ಅಮ್ಮನಕಟ್ಟೆ ಮತ್ತು ಸಿದ್ದೇಶ್ವರ ಮಠವಿದ್ದು ಅದರ ಸುತ್ತಲೂ ದೇವಾಲಯಗಳಿದ್ದ ಅವಶೇಷಗಳು ಕಂಡುಬರುತ್ತವೆ.

ಹತ್ತಿರದಲ್ಲಿಯೇ ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಿದ ಮನೆಯಿದ್ದು ಶಿಥಿಲಗೊಂಡಿದೆ. ಅದಕ್ಕೆ ಮದ್ದಿನ ಮನೆಯೆಂದು ಸ್ಥಳೀಯರು ಅಭಿಪ್ರಾಯ ಪಡುತ್ತಾರೆ ಇದರ ಬಲ ಬದಿಯಲ್ಲಿ ಪಾಳೇಗಾರರ ಕಾಲಕ್ಕೆ ಸೇರಬಹುದಾದ ಗ್ರಾನೈಟ ಶಿಲೆಯಿಂದ ನಿರ್ಮಾಣಗೊಂಡಿರುವ ಬಾವಿಯಿದೆ. ಇದರ ಬಲ ಬದಿಯ ದಾರಿಯು ಪಶ್ಚಿಮಕ್ಕೆ ಮುಂದೋಗುವ ಸ್ವಲ್ಪ ಅಂತರದಲ್ಲಿ ಎರಡೂ ಪಾರ್ಶ್ವಕ್ಕೆ ಕಟ್ಟೆಗಳಿವೆ. ಇವು ದೇವಾಲಯದ ಅಧಿಷ್ಠಾನಗಳಂತೆ ಗೋಚರಿಸುತ್ತವೆ. ಈ ಸ್ಥಳದಿಂದ ಸು. 50 ಮೀ. ಪಶ್ಚಿಮಕ್ಕೆ ಗಣೇಶನ ದೇವಾಲಯವಿದ್ದು ಇದರ ಎದುರುಭಾಗದಲ್ಲಿ ದೊಡ್ಡದಾದ ಕಟ್ಟೆಯಿದೆ. ಇದು ಪಾಳೇಗಾರರ ಕಾಲದ ನ್ಯಾಯದಾನದ ಕಟ್ಟೆಯಾಗಿದೆ ಎಂದು ಸ್ಥಳೀಯರು ಅಭಿಪ್ರಾಯ ಪಡುತ್ತಾರೆ.

ಇಲ್ಲಿಂದಲೇ ದಾರಿ ಕವಲೊಡೆಯುತ್ತದೆ. ಪಶ್ಚಿಮಕ್ಕೆ ಹರಿಹರದ ಬಾಗಿಲು ಇದರ ದಕ್ಷಿಣಕ್ಕೆ ಸು. 50 ಮೀ. ದೂರದಲ್ಲಿ ಬಯಲು ಇದರ ಹತ್ತಿರಕ್ಕೆ ಲಿಂಗ (ರಾಮ ಬಾಣ:)ವಿದೆ. ಇಲ್ಲಿಂದ ದಕ್ಷಿಣದಲ್ಲಿ ಕಾಣುವುದೇ ರಾಮಲಿಂಗೇಶ್ವರ ದೇವಸ್ಥಾನ (ಗೋಪಾಲಕೃಷ್ಣ) ಇದರ ಉತ್ತರಕ್ಕಿರುವ ಬೆಟ್ಟ ಮತ್ತು ಕೋಟೆಯ ದೃಶ್ಯ ಒಟ್ಟಾರೆ ಗೋಚರಿಸುತ್ತದೆ.

ಕವಲೊಡೆದ ಒಂದು ದಾರಿಯು ಉತ್ತರದ ಬೆಟ್ಟದ ಮೇಲಕ್ಕೆ ಮುಂದುವರೆಯುತ್ತದೆ. ಆಗ ಮೊದಲಿಗೆ ಸಿಗುವ ಕೋಟೆಯ ಬಾಗಿಲಿಗೆ ಬಾಳೆಹಣ್ಣಿನ ಬಾಗಿಲೆಂದು ಕರೆಯುತ್ತಾರೆ.[7] ಮುಂದುವರೆಯುವ ದಾರಿಯಲ್ಲಿ ಉತ್ತರಕ್ಕೆ ಸು. 50 ಮೀ. ಅಂತರದಲ್ಲಿ ಇನ್ನೊಂದು ಕೋಟೆ ಬಾಗಿಲಿದೆ. ಇದರ ಪ್ರವೇಶದ ನಂತರ ಬಲ ಭಾಗದಲ್ಲಿ ವಿರುಪಾಕ್ಷ ದೇವಾಲಯವಿದೆ. ಈ ದೇವಾಲಯಕ್ಕೆ ಶಾಸನದಲ್ಲಿ ನರಸಿಂಹ ದೇವಾಲಯ ವೆಂದು ಕರೆದಿದೆ.[8] ಇದರ ಎಡ ಪಾರ್ಶ್ವದಲ್ಲಿ ಬಟ್ಟಲು ಬಾವಿ ಇದ್ದು ಇಲ್ಲಿಂದ ಉತ್ತರಕ್ಕೆ ಸು. 50 ಅಡಿ ಅಂತರದಲ್ಲಿ ತೊಟ್ಟಿಲ ಬಾವಿಯಿದೆ. ಈ ಎರಡೂ ಬಾವಿಗಳ ಪೂರ್ವ ದಿಕ್ಕಿನಲ್ಲಿರುವುದೇ ಆನೆಹೊಂಡ. ಉತ್ತರಕ್ಕಿರುವುದು ರಾಣಿಯ ಅರಮನೆ. ಇದರ ಮುಂಭಾಗದಲ್ಲಿ ಎರಡು ಕೊಳಗಳಿವೆ. ಅವಕ್ಕೆ ಎಣ್ಣೆ ಮತ್ತು ತುಪ್ಪದ ಕೊಳಗಳೆಂದು ಸ್ಥಳೀಯರು ಕರೆಯುತ್ತಾರೆ. ಈ ಅರಮನೆಯಿಂದ ಸು. 100 ಮೀ. ಉತ್ತರಕ್ಕೆ ರಾಜನ ಅರಮನೆಯಿದೆ. ಇದರ ಬಲಭಾಗಕ್ಕೆ ಸು. 50 ಅಡಿ ಆಳದಲ್ಲಿ ಕಂದಕವಿದ್ದು ಇದಕ್ಕೆ ಅರಿಶಿಣಹೊಂಡವೆಂದು ಕರೆಯುತ್ತಾರೆ. ಅರಿಶಿಣಹೊಂಡದಿಂದ ಸು.50ಮೀ. ಮುಂಭಾಗದಲ್ಲಿ ಮೋದಿಗರ ಮನೆಗಳಿವೆ ಅವರು ಉಚ್ಚಂಗೆಮ್ಮ ಸೇವೆಗಾಗಿ ಇಲ್ಲಿ ವಾಸಿಸಿದಂತೆ ಕಂಡುಬರುತ್ತದೆ. ರಾಜನ ಅರಮನೆಯ ಮುಂಭಾಗದಲ್ಲಿ ಕಟ್ಟೆಯಿದೆ. ಇದಕ್ಕೆ 'ಭಾರತ ಹುಣ್ಣಿಮೆಯ ಕಟ್ಟೆ' ಎಂದು ಕರೆಯುತ್ತಾರೆ.[9] ಈ ಕಟ್ಟೆಯ ಮೇಲ್ಭಾಗದಲ್ಲಿ ಅಳಿಸಹೋದ ಶಾಸನ ಮತ್ತು ತುಂಡು ಶಿಲ್ಪವಿದೆ.

ಇದರ ಎಡ ಮತ್ತು ಬಲ ಬದಿಯಲ್ಲಿ ಸುತ್ತುವರೆದ ಸು. 100 ಅರ್ಚಕರ ಮನೆಗಳಿವೆ. ಇಲ್ಲಿ ಒಂದು ಪ್ರಾಥಮಿಕ ಶಾಲೆಯಿದ್ದು ಉತ್ಸವಾಂಬ ಹೆಸರಿನಲ್ಲಿ ಒಂದು ತರುಣ ಸಂಘವಿದೆ. ಹಬ್ಬ ಹರಿದಿನಗಳಲ್ಲಿ ಈ ಸಂಘವು ಬಹಳ ಪಾತ್ರವಹಿಸುತ್ತದೆ. ಈ ಭಾಗದ ಜನ ಕುಡಿಯಲು ಬಳಸಲು ಅರಿಶಿಣಹೊಂಡದ ನೀರನ್ನೇ ಉಪಯೋಗಿಸುತ್ತಾರೆ.

ಅರಿಶಿಣ ಹೊಂಡದ ನೀರನ್ನು ಬಿಟ್ಟರೆ ಬೇರೆ ನೀರಿನ ಸೌಲಭ್ಯವಿಲ್ಲ. ಈ ಊರಿನ ಉತ್ತರಕ್ಕೆ ಉಚ್ಚಂಗೆಮ್ಮನ ದೇವಾಲಯವಿದೆ. ಇದೆ ಸುತ್ತ ಮುತ್ತಲಿನ ಪ್ರದೇಶಗಳಿಗೆ ಎತ್ತರವಾದ ಭಾಗ ಈ ದೇವಾಲಯದ ಪೂರ್ವ ಪಶ್ಚಿಮ ಮತ್ತು ಉತ್ತರಕ್ಕೆ ಕಡಿದಾದ ಬೆಟ್ಟ ಪ್ರದೇಶವಿದೆ. ಇಲ್ಲಿಂದ ದಕ್ಷಿಣಕ್ಕೆ ಈ ಬೆಟ್ಟವು ಇಳಿಮುಖವಾಗುತ್ತ ಹೋಗಿದೆ ಆದ್ದರಿಂದ ಬೆಟ್ಟದ ಮೇಲಿರುವ ಕೋಟೆ ಸುತ್ತಲಿನ ಸಣ್ಣಪುಟ್ಟ ಗ್ರಾಮಗಳು ಇಂದಿನ ಉಚ್ಚಂಗಿ ದುರ್ಗದ ಕೆಳಗಿನ ಮನೆಗಳು ಚೆನ್ನಾಗಿ ಗೋಚರಿಸುತ್ತವೆ. ಈ ಬೆಟ್ಟವು ನೆಲಮಟ್ಟದಿಂದ ಸು. 650 ಅಡಿ ಎತ್ತರವಾಗಿದೆ.[10]

ಈ ಮೇಲಿನ ವಿಷಯದ ಅವಲೋಕನ ಮತ್ತು ಸ್ಥಳ ಪರಿಚಯದಿಂದ ವ್ಯವಸ್ಥಿತವಾಗಿ ಕೋಟೆಯನ್ನು ಪರ್ವತ ಬಳಸಿಕೊಂಡು ಕಟ್ಟಿರುವುದನ್ನು ಗಮನಿಸಬಹುದಾಗಿದೆ. ಕೋಟೆಯ ಗೋಡೆಗಳು ಅರಮನೆಗಳ ಗೋಡೆಗಳು ಉಚ್ಚಂಗೆಮ್ಮ ದೇವಾಲಯದ ಸ್ವರೂಪ, ಇಲ್ಲಿರುವ ಅರ್ಚಕರ ಮನೆಗಳಿಗೆ ಹೋಲಿಸಿದರೆ ಅರ್ಚಕರ ಮನೆಗಳು ಇತ್ತೀಚಿನವು ಎಂದು ಗೋಚರಿಸುವದರಿಂದ ಬಹುಶಃ ಉಚ್ಚಂಗೆಮ್ಮನ ಮೂಲ ಅರ್ಚಕರು. ಬೇರೆ ಕಡೆ ವಾಸಿಸಿದಬಹುದಾಗಿದೆ. ನಂತರ ಬಂದ ಅರ್ಚಕರು ಇಲ್ಲಿ ವಾಸಿರಬಹುದಾಗಿದನ್ನು ಕಲ್ಪಿಸಲವಕಾಶವಿದೆ.

ಉಚ್ಚಂಗಿದುರ್ಗ ಬೆಟ್ಟದ ಪೂರ್ವ ಕೆಳಭಾಗದಲ್ಲಿರುವುದೇ ಮುಖ್ಯವಾದ ಊರು. ಈ ಊರಿನ ಪೂರ್ವ ಭಾಗದಲ್ಲಿ ಪ್ರಮುಖವಾದ ಮೂರು ರಸ್ತೆಗಳಿದ್ದು ಇವುಗಳನ್ನು ಒಳಗೆ ಮಾಡಿಕೊಂಡು ಈ ಊರು ಪಶ್ಚಿಮಕ್ಕೆ ಹಬ್ಬಿದೆ. ಸು. 2500 ಮನೆಗಳಿರುವ ಈ ಗ್ರಾಮವು ಮಂಡಲ ಪಂಚಾಯ್ತಿಯ ಕೇಂದ್ರವಾಗಿದೆ.

## ಕೋಷ್ಟಕ – 1

### ಗ್ರಾಮದ ಸವಿವರ ಕೋಷ್ಟಕ

| ಹೆಸರುಗಳು | ಎಕ್ಟೇರ್‌ಗಳಲ್ಲಿ | |
|---|---|---|
| 1) ಭೌಗೋಳಿಕ ಕ್ಷೇತ್ರ | 9.826.76 | |
| 2) ಸಾಗುಕ್ಷೇತ್ರ | 5.660.64 | |
| 3) ಸಾಗುವಳಿಯಾಗದೆ ಇರುವ ಭೂಮಿ | 4,166.12 | |
| 4) ಗ್ರಾಮದ ಮುಂಗಾರಿ ಕ್ಷೇತ್ರ | 5,660.64 | |
| 5 ) ಗ್ರಾಮದ ಖುಷ್ಕಿ ಭೂಮಿ | 5,440.64 | |
| 6) ಗ್ರಾಮದ ನೀರಾವರಿ | 0,220.00 | |
| 7) ರಸ್ತೆಗಳು, ಕಾಲುದಾರಿ | 52.22 | |
| 8) ಹಳ್ಳಗಳು | 22 | |
| 9) ಊರುಧನ, ಕರುಗಳು ಮೇಯುವ ಬೆಟ್ಟ (ಅರಣ್ಯ ಪ್ರದೇಶ) ಭೂಮಿ | 2,108.32 | |
| 10) ಸ್ಮಶಾನ | 14.02 | |
| 11) ಒಟ್ಟು ಖಾತೆದಾರರ ಸಂಖ್ಯೆ | 860 | ಕುಟುಂಬಗಳು |
| 12) ಚಿಕ್ಕ ಹಿಡುವಳಿದಾರರ ಸಂಖ್ಯೆ | 360 | —"— |
| 13) ಅತಿ ಚಿಕ್ಕ ಹಿಡುವಳಿದಾರರ ಸಂಖ್ಯೆ | 200 | —"— |
| 14) ದನ ಕರುಗಳ ಸಂಖ್ಯೆ | 3,500 | |
| 15) ಕೃಷಿ ಕಾರ್ಮಿಕರ ಸಂಖ್ಯೆ | 3,500 | |
| 16) ಊರಿನ ಜನಸಂಖ್ಯೆ (1991ರ ಜನಗಣತಿ) | 7,732 | |

ಕೃಪೆ:- K. ಕರೇಗೌಡ

ಸುಮಾರು 8000 ಜನಸಂಖ್ಯೆ ಇರುವ ಈ ಪ್ರದೇಶದಲ್ಲಿ 8 ಪ್ರಾಥಮಿಕ ಶಾಲೆಗಳು 1 ಪ್ರೌಢಶಾಲೆ, ಮತ್ತು ಕಾಲೇಜನ್ನು ಹೊಂದಿದೆ. ತುಂಗಭದ್ರ ಗ್ರಾಮೀಣ ಬ್ಯಾಂಕ, ನ್ಯಾಯಬೆಲೆ ಅಂಗಡಿ, ಅಂಚೆ ಕಛೇರಿ ಮತ್ತು ಸೊಸೈಟಿಯನ್ನು ಹೊಂದಿರುವುದಲ್ಲದೇ ಗ್ರಾಮೀಣ ಗ್ರಂಥಾಲಯ ಹೊಂದಿದೆ. ಹಿಟ್ಟಿನ ಗಿರಣಿಗಳು, ದನದ ಆಸ್ಪತ್ರೆಗಳು, ಹಾಗೂ ಊರಿಗೆ ಟೆಲಿಫೋನ್ ಸೌಲಭ್ಯ ಇದೆ. ಊರಿಗೆ ನೀರಿನ ಸೌಲಭ್ಯಕ್ಕಾಗಿ 3 ಭೋರುಗಳಿವೆ. 2 ಟ್ಯಾಂಕಿಗಳು, 2 ಬಾವಿಗಳನ್ನು ಹೊಂದಿದೆ. ಈ ಊರಿನ ಜನರು ಬಹುತೇಕ ಕೃಷಿ ಅವಲಂಬಿತರಾಗಿದಾರೆ.

## ಊರಿನ ಪದದ ನಿಷ್ಪತ್ತಿ :

ಒಂದು ಪ್ರದೇಶದ ಅಧ್ಯಯನ ಕೈಗೊಳ್ಳುವ ಮೊದಲು ಆದರ ಹೆಸರು, ಹುಟ್ಟು ಇತ್ಯಾದಿಗಳನ್ನು ಚರ್ಚಿಸುವುದರಿಂದ ಅನೇಕ ಮಾಹಿತಿಗಳು ದೊರಕುವುವು. ಲಭ್ಯವಿದ್ದ ಆಧಾರಗಳನ್ನು ಬಳಸಿಕೊಂಡು ಜನಪದರ ಹೇಳಿಕೆಗಳೊಂದಿಗೆ ಉಚ್ಚಂಗಿದುರ್ಗದ ನಾಮದ ಹುಟ್ಟು ಮತ್ತು ಬೆಳವಣಿಗೆಯನ್ನು ಚರ್ಚಿಸಲು ಪ್ರಯತ್ನಿಸಿದೆ.

ಜನಪದರ ನಂಬಿಕೆಯಂತೆ ಈ ಊರಿನ ನಿಷ್ಪತ್ತಿ ಹೀಗಿದೆ. ಹಿಂದಿನ ಉಚ್ಚಂಗಿ ಬೆಟ್ಟದ ಮೇಲೆ ಸಿದ್ಧರು ವಾಸಿಸಿದ್ದಾರೆ. ಅವರು ಸುತ್ತಮುತ್ತಲಿನ ಗ್ರಾಮಗಳಿಂದ ಭಿಕ್ಷೆ ಬೇಡಿಕೊಂಡು ಬರುತ್ತಿದ್ದರು. ಮಾಯ, ಮಾಟ, ಮಂತ್ರ ಮಾಡಿ ಜನರನ್ನು ಭೀತಿ ಗ್ರಸ್ಥರನ್ನಾಗಿ ಮಾಡಿದ್ದರು. ಇದರಿಂದ ಉಚ್ಚಂಗಿಯ ಮತ್ತು ಸುತ್ತಲಿನ ಜನತೆ ತುಂಬಾ ಭೀತರಾಗಿದ್ದರು. ಈ ಸಂದರ್ಭದಲ್ಲಿ ದೇವತಾ ಸ್ತ್ರೀಯೊಬ್ಬಳು ಈ ಬೆಟ್ಟದ ಮೇಲೆ ವಾಸಿಸಲು ಇಚ್ಛಿಸಿದಳು. ಆದರೆ ಇದಕ್ಕೆ ಸಿದ್ಧರ ವಿರೋಧವಿತ್ತು. ಹೇಗೋ ಅವರನ್ನು ಒಪ್ಪಿಸಿ ಅವರ ಜೊತೆಗೆ ಇದ್ದಳು. ಅವರಿಗೆ ಅಡುಗೆ ಮಾಡಿ ನೀಡುತ್ತಿದ್ದಳು. ಒಂದು ಸಲ ಅಡುಗೆಯಲ್ಲಿ ಭಂಗಿಯ ಪುಡಿಯನ್ನು ಬೆರಸಿ ಕುಡಿಸಿದಳು. (ಇಲಿಸವ್ವನ ಹಾಡಿನಲ್ಲಿ ಇದರ ವಿವರ ಸಿಗುತ್ತದೆ) ಭಂಗಿಯನ್ನು ಕುಡಿದ ಸಿದ್ಧರು ಇವಳನ್ನು ಮೋಹಿಸಲು ಹೋದರು. ಆಗ ಸಿಟ್ಟಿಗೆದ್ದ ಈ ಸ್ತ್ರೀ ಬೆಟ್ಟದ ಮೇಲೆ ಉಚ್ಚಿಯನ್ನು ಮಾಡಿದಳು. ಈ ಉಚ್ಚಿಯ ರಭಸದಲ್ಲಿ ಸಿದ್ಧರು ತೇಲಿ ಕೆಲವರು ಹತರಾದರು. ಮತ್ತೆ ಕೆಲವರು ಕೆಳಗೆ ಬಿದ್ದು ಓಡಿ ಹೋದರೆಂದು ಹೀಗೆ ಉಚ್ಚಿಯಿಂದಲೇ ಗುರುತಿಸಿ ಉಚ್ಚಮ್ಮ, ಉಚ್ಚಂಗಿ ಎಂಬ ಹೆಸರು ಬಂತೆಂದು ಸ್ಥಳೀಯರು ಅಭಿಪ್ರಾಯ -ಪಡುತ್ತಾರೆ.

ಜನಪದರ ಹೇಳಿಕೆಗಳೊಂದಿಗೆ ಮತ್ತು ಅದಕ್ಕಿಂತಲೂ ಹೆಚ್ಚು ಮಹತ್ವದ ಆಕರಗಳೆಂದರೆ ಶಾಸನಗಳು. ಇವುಗಳು ಉಚ್ಚಂಗಿಯ ಹೆಸರಿನ ಆ ಕಾಲಕ್ಕೆ ಇದ್ದ ಕಥೆಗಳನ್ನು ದಾಖಲಿಸಿವೆ. ಉಚ್ಚಂಗಿದುರ್ಗಕ್ಕೆ 4 ಹೆಸರುಗಳಿದ್ದುವು. ಕೃತ ಯುಗದಲ್ಲಿ ಮೇಘನಾದ, ತ್ರೇತಾಯುಗದಲ್ಲಿ ಕನಕಗಿರಿ, ದ್ವಾಪರ ಯುಗದಲ್ಲಿ ಉತ್ತುಂಗ ಪರ್ವತ, ಕಲಿಯುಗದಲ್ಲಿ ಉಚ್ಚಂಗಿ ಎಂದು ಕರೆಯುತ್ತಿದ್ದರೆಂಬ ಮಾಹಿತಿಯನ್ನು ಇಲ್ಲಿರುವ ಶಾಸನದಿಂದ (ಕ್ರಿ.ಶ. 1064 ರಲ್ಲಿ) ತಿಳಿದುಬರುತ್ತದೆ. ಈ ಶಾಸನೋಕ್ತ ವಿವರಗಳು ಉಚ್ಚಂಗಿದುರ್ಗಕ್ಕೆ ಇರುವ ಪ್ರಾಚೀನತೆಯನ್ನು ತಿಳಿಸುತ್ತವೆ.

ಹಾರತೀ ಪುತ್ರರಾದ ಕದಂಬ ವಂಶದ ಕುಮಾರವರ್ಮನ ಮಗನಾದ ಮಾಂಧಾತ

ರಾಜನು ಉಚ್ಚಂಗಿ, ಉಚ್ಚಶೃಂಗಿಯ ರಾಜಧಾನಿಯಿಂದ ಆಳುತ್ತಿದ್ದನು[11] ಈ ಕದಂಬರು ಇದೇ ಉಚ್ಚಂಗಿಯನ್ನು ಕೇಂದ್ರ ಮಾಡಿ ಕೊಂಡಿದ್ದರೆಂಬುದನ್ನು ಅವರ - ರಾಜಕೀಯ ಇತಿಹಾಸದಲ್ಲಿ ಚರ್ಚಿಸಲಾಗಿದೆ. ಕದಂಬರ ನಂತರ ಆಳಿದ ಬಾದಾಮಿ ಚಾಳುಕ್ಯ ರಾಷ್ಟ್ರಕೂಟರ ಶಾಸನಗಳಾವುವು ಇಲ್ಲಿ ದೊರೆತಿಲ್ಲ. ಮುಂದೆ ಲಭ್ಯವಿರುವ ಕಲ್ಯಾಣಿ ಚಾಲುಕ್ಯರ, ಪಾಂಡ್ಯರ, ಹೊಯ್ಸಳರ ಶಾಸನಗಳಲ್ಲಿ ಉಚ್ಚಂಗಿದುರ್ಗದ ಹೆಸರು ಉಲ್ಲೇಖ ವಾಗಿರುವುದನ್ನು ಶಾಸನ ಪಾಠಗಳಲ್ಲಿ ಕಾಣಬಹುದು. ಕೋಟೆಯ ನಿರ್ಮಾಣದ ನಂತರ ಉಚ್ಚಂಗಿ — ಉಚ್ಚಂಗಿದುರ್ಗ ವಾಗಿದೆ. ಪಾಳೇಗಾರರಿಂದ ಇಂದಿನವರೆಗೆ ಉಚ್ಚಂಗಿದುರ್ಗ ಎಂಬ ಹೆಸರು ಬಳಕೆಯಲ್ಲಿದೆ.

ಉಚ್ಚಂಗಿ ಎಂಬಲ್ಲಿ ಕೊನೆಗೆ ಬರುವ 'ಗಿ' ಕಾರ ಹಚ್ಚಿಕೊಂಡು ಬರುವ ಗ್ರಾಮ ನಾಮಗಳು ಉತ್ತರ ಕರ್ನಾಟಕದಲ್ಲಿ ಅನೇಕ ಕಡೆ ದೊರೆಯುತ್ತವೆ. ನಿದರ್ಶನಕ್ಕಾಗಿ ಕೆಲವನ್ನು ನೋಡಬಹುದು . ಗೊಣಸಗಿ, ಉತ್ತಂಗಿ, ಹುಣಸಗಿ, ಮೆಣಸಗಿ, ಚಿಮ್ಮಲಗಿ, ಹಂಗರಗಿ, ಅರಸಂಗಿ, ನರಸಂಗಿ, ತಡ್ಲಗಿ, ತೆಲಗಿ, ಮುತ್ತಗಿ, ಕೂಡ್ಲಗಿ, ತಂಗಡಗಿ, ಆಸಂಗಿ, ಚಂದರಗಿ, ಅಂಕಲಗಿ, ಇತ್ಯಾದಿ ಇಲ್ಲಿಯ 'ಗಿ' ಗಾವ ಗ್ರಾಮದ ಹ್ರಸ್ವರೂಪ. ಕೆಯ್>ಗೆಯ್>ಗೆ>ಗಿ ಕೆಯ್ =ಹೊಲ. ಸ್ಥಳ ಅರ್ಥವನ್ನು ನೀಡುತ್ತದೆ. ಗ್ರಾಮದ ಚರಿತೆಗೆ ಭಾಷಿಕ ಅಧ್ಯಯನ ಒಂದು ಮುಖ್ಯ ಆಕರವಾಗಿದೆ. ಉತ್ತರ ಕನ್ನಡ ಜಿಲ್ಲೆಯ ಮುಂಡಗೋಡ ತಾಲೂಕಿನಲ್ಲಿ ಉಚಗೇರಿ, ಉಮಚಗಿ ಇದೆ ಜಿಲ್ಲೆಯ ಯಲ್ಲಾಪುರ ತಾಲೂಕಿನ ಉಚಗೇರಿ, ಚಿತ್ರದುರ್ಗ ಜಿಲ್ಲೆ ಜಗಳೂರು ತಾಲೂಕಿನಲ್ಲಿ ಹುಚ್ಚಂಗಿಪುರ ಎಂಬ ಊರುಗಳಿವೆ.

ಉಚ್ಚ — ಎತ್ತರ, ಶ್ರೇಷ್ಠ, ಉಚ್ ಶೃಂಗಿ — ಉಚ್ಚಶೃಂಗಿ. ಉಚ್–ಎತ್ತರವಾದ ಶೃಂಗ — ಕೋಡತ, ಶಿಖರ ಎಂದಾಗಿರಬೇಕು.[12]

ಈ ಊರಿನ ಸುತ್ತಲೂ ಇರುವ ಬೆಟ್ಟಗಳಲ್ಲಿ ಇದು ಎತ್ತರದ್ದಾಗಿದೆ. ಇದಕ್ಕಾಗಿ ಇದಕ್ಕೆ ಉಚ್ಚಂಗಿ ದುರ್ಗ ಎಂದು ಹೆಸರು ಬಂದಿರಬಹುದಾಗಿದೆ. ಸಧ್ಯಕ್ಕೆ ಸಂಸ್ಕೃತ ಮೂಲದ ನಿಷ್ಪತ್ತಿಯನ್ನು ಒಪ್ಪಬಹುದಾಗಿದೆ.

## ಉಚ್ಚಂಗಿದುರ್ಗದ ಶಾಸನಗಳಲ್ಲಿ ನಾಡಿನ ಉಲ್ಲೇಖಗಳು :

ಉಚ್ಚಂಗಿ ದುರ್ಗವು ನಾಡಾಗಿತ್ತು. ಅದರ ಉಲ್ಲೇಖ ಈ ಕೆಳಗಿನ ಶಾಸನದಲ್ಲಿ ಗಮನಿಸಬಹುದು.

ವೀರ ಪಾಂಡ್ಯ ದೇವರಸರು ನೊಳಂಬವಾಡಿ ಮೂವತ್ತುಚ್ಛಾಸಿರ ಮುಮಂ ರಾಜ್ಯವಾಳುತ್ತಿರಲು ಶ್ರೀ ಮನ್ಮಹಾಪ್ರಧಾನ ಉಚ್ಚಂಗಿ ನಾಡಾಳ್ವ ದಂಡನಾಯಕರು[13] ಮತ್ತು ಉಚ್ಚಂಗಿ-30 ಎನ್ನುವುದು ಈ ಕೆಳಗಿನ ಶಾಸನದಲ್ಲಿ ಕಾಣಬಹುದಾಗಿದೆ. ಶ್ರೀ ಸ್ವಯಂಭು ದೇವರ ದಿವ್ಯ ಶ್ರೀ ಪಾದ ಪದ್ಮಾರಾಧಕಂ ಸಾಬಿರನಾಡ ಶ್ರೀ ಮನುಮಹಾ ನಾಳ್ಪ್ರಭು ಅಸಗೆಯೋಡ ಪಲ್ಲವ ಸಾಮಂತನು ಉಚ್ಚಂಗಿ ಮೂವತ್ತರೊಳು[14] ಮೂವತ್ತು ಗ್ರಾಮ ನಾವು ಸೂಚಿಂತಾದರೆ, ಉಚ್ಚಂಗಿ 30 ಗ್ರಾಮಗಳಿಗೆ ಪ್ರಮುಖ ಕೇಂದ್ರವಾಗಿರಬೇಕು.

## ಅಡಿಟಿಪ್ಪಣಿಗಳು

1) ಸಾ.ಇ.ಇ. ಸಂ. 9 ಭಾಗ – 1 ಸಂಖ್ಯೆ – 126

2) ಉಚ್ಚಂಗಿ ದುರ್ಗದ ಹಾಲಮ್ಮನ ಗುಡಿ ಮುಂದಿರುವ ಶಾಸನ

3) ಸಾ.ಇ, ಇ. ಸಂ. 6, ಸಂಖ್ಯೆ – 572

4) ನಿರಾಣೀಶ್ವರ ದೇವಾಲಯದ ಮುಂದಿರುವ (ಉಚ್ಚಂಗಿದುರ್ಗ)

5) ಸಾ. ಇ. ಇ. ಸಂಪು. 6 ಸಂಖ್ಯೆ – 574

6) ——"—— ———— – 575

7) ಬಾಳೇ ಹಣ್ಣನ್ನು ತಿಕ್ಕುತ್ತಾರೆ ಅದರಿಂದ ಈ
ಹೆಸರು ಬಂದಿದೆ.

8) ಉಚ್ಚಂಗಿದುರ್ಗದ ಬಂಡೆ ಶಾಸನ

9) ಪ್ರತಿ ಭಾರತ ಹುಣ್ಣಿಮೆ ಯ ಹಿಂದಿನ ದಿನ ಮುತ್ತೈದೆಯರು
(ಅರ್ಚಕರ ಮನೆಯವರು) ಇಲ್ಲಿ ಕಳಸ ಬೆಳಗುತ್ತಾರೆ.

10) ಕಂದಾಯ ಇಲಾಖೆ ಸರ್ವೆ.

11) ಆರ್.ಎಸ್. ಪಂಚಮುಖಿ ಕರ್ನಾಟಕ ಇತಿಹಾಸ ಧಾ ಪುಟ 111 ಧಾರವಾಡ

12) The Indian Antiquary January 1877 Page – 31
Sanskrit and old Canarese Discriptions

13) ಸಾ.ಇ. ಇ. ಸಂ – 9 , ಸಂಖ್ಯೆ – 245

14) ——"—— —— ಭಾಗ – 1 ಪುಟ. 339.

° ° ° – – – ° ° °

# ಅಧ್ಯಾಯ ≡ ಮೂರು

## ಐತಿಹಾಸಿಕ ಹಿನ್ನೆಲೆಯಲ್ಲಿ ಉಚ್ಚಂಗಿದುರ್ಗ

### ಉಚ್ಚಂಗಿದುರ್ಗದ ಪ್ರಾಚೀನತೆ :

ಮನುಷ್ಯ ಜೀವನಕ್ಕೆ ಅವಶ್ಯಕತೆಗಳಾದ ಹಿತಕರವಾದ ವಾಯುಗುಣ, ಫಲವತ್ತಾದ ಭೂಪ್ರದೇಶ, ಜಲಸಮೃದ್ಧಿ ಈ ಅನುಕೂಲಗಳು, ಇವುಗಳ ಜೊತೆಗೆ ವಾಸಿಸಲು ಯೋಗ್ಯವಾದ ಗಿರಿ ಕಂದರಗಳು, ಉಚ್ಚಂಗಿಯಲ್ಲಿರುವುದರಿಂದ ಈ ಪ್ರದೇಶದಲ್ಲಿ ಅತೀ ಪ್ರಾಚೀನ ಕಾಲದಿಂದಲೂ, ಜನರು ನೆಲಸಿರುವುದಕ್ಕೆ ಕುರುಹುಗಳಿವೆ. ಉಚ್ಚಂಗಿದುರ್ಗದಲ್ಲಿ ಚಾರಿತ್ರಿಕ ಇತಿಹಾಸಕ್ಕಿಂತಲೂ ಹಿಂದಿನ ಎರಡು ಪ್ರಾಕ್ಚಾರಿತ್ರಿಕ ನೆಲೆಗಳು ಕಂಡುಬರುತ್ತವೆ. ಬೆಟ್ಟದ ಮೇಲೆ ಒಂದು ನೆಲೆಯು ಕಂಡುಬಂದರೆ, ಕೆಳಭಾಗದಲ್ಲಿ ಪೂರ್ವಕ್ಕೆ ಬನಶಂಕರಿ ದೇವಾಲಯದ ಆವರಣದಲ್ಲಿ ಮತ್ತೊಂದು ನೆಲೆಯನ್ನು ಕಾಣಬಹುದು.

ಬೆಟ್ಟದ ಮೇಲಿರುವ ನೆಲೆಯನ್ನು ಅವಲೋಕಿಸಿದಾಗ ಅಲ್ಲಿ ದೊರೆತ ಅವಶೇಷ-ಗಳು ಯಾವುವೆಂದರೆ, ಬೂದು ಬಣ್ಣದ ಮಡಿಕೆ ಚೂರುಗಳು, ಕೆಂಪು ಮತ್ತು ಕಪ್ಪು ಬಣ್ಣದ ಮಡಿಕೆ ಚೂರುಗಳೊಂದಿಗೆ, ಮತ್ತಿತರ ಅವಶೇಷಗಳು ದೊರೆತಿವೆ. ಬೂದು ಬಣ್ಣದ ಮಣ್ಣಿನಿಂದ ಕೂಡಿದ ದಿಬ್ಬದಲ್ಲಿ ಈ ಮೇಲಿನ ಅವಶೇಷಗಳು ಪದರ ಪದರವಾಗಿ ದೊರೆಯುತ್ತವೆ. ಬನಶಂಕರಿ ದೇವಾಲಯದ ಮುಂದಿನ ಪ್ರದೇಶವು ಪ್ರಾಚೀನ ನೆಲೆಯಾಗಿದ್ದಿತೆಂಬುದು ಅಲ್ಲಿನ ಬೂದಿ ಮತ್ತು ಮಡಿಕೆಯ ಅವಶೇಷಗಳಿಂದ ತಿಳಿದು ಬರುವುದು. ಈ ನೆಲೆಯನ್ನು ವೈಜ್ಞಾನಿಕ ವಿಧಾನಗಳ ಮೂಲಕ ಪರಿಶೀಲಿಸುವ ಅಗತ್ಯವಿದೆ. ಈ ಸ್ಥಳಕ್ಕೆ ನಾಲ್ಕು ಯುಗಗಳಲ್ಲಿ ನಾಲ್ಕು ಹೆಸರುಗಳಿದ್ದು, ಕೃತ-ಯುಗದಲ್ಲಿ ಮೇಘನಾದ, ತ್ರೇತಾಯುಗದಲ್ಲಿ ಕನಕಗಿರಿ, ದ್ವಾಪರಯುಗದಲ್ಲಿ ಉತ್ತುಂಗ, ಕಲಿಯುಗದಲ್ಲಿ ಉಚ್ಚಂಗಿ. ಈ ಮೇಲಿನ ಉಲ್ಲೇಖಗಳು ಶಾಸನಗಳಲ್ಲಿ ಬರುವುದು.[1] ಈ ಹೆಸರುಗಳೂ ಕೂಡಾ ಉಚ್ಚಂಗಿ ದುರ್ಗದ ಪ್ರಾಚೀನತೆಯನ್ನು ತೋರಿಸುತ್ತವೆ. ಪ್ರಾಚೀನ ಮಾನವನ ಆವಾಸ ಸ್ಥಾನಗಳಲ್ಲಿ ಉಚ್ಚಂಗಿದುರ್ಗವೂ ಒಂದಾಗಿರುವುದು ತಿಳಿದುಬರುತ್ತದೆ.

## ಉಚ್ಚಂಗಿದುರ್ಗ ಮತ್ತು ಪಲ್ಲವರು :

ಕರ್ನಾಟಕವನ್ನು ಶಾತವಾಹನರು ಆಳಿದ ವೇಳೆ ಅವರ ಸಾಮಂತರಾಗಿದ್ದರ ಬಹುದಾದ ಕಾಂಚಿಯ ಪಲ್ಲವರು ಸ್ವಲ್ಪ ಕಾಲ ಆಳುತ್ತಾರೆ. ಹಿರೇಹಡಗಲ ಮ್ಯಾಕಡೋಣಿ ಶಾಸನದಲ್ಲಿ ಈ ವಿಷಯ ತಿಳಿಯುತ್ತದೆ. ಈ ಪ್ರದೇಶವನ್ನು ಶಾತವಾಹನಿರಟ್ಟ ಎಂದು ಕರೆದಿದೆ. ಆದರೂ ಉಚ್ಚಂಗಿ ದುರ್ಗಕ್ಕೆ ಸಂಬಂಧಿಸಿದತೆ ಪಲ್ಲವರ ಯಾವ ಕುರುಹುಗಳು ದೊರಕುವುದಿಲ್ಲ. ಆದರೆ ಕೆಲವು ಮಾಹಿತಿಗಳು ಹಾಗೂ ಕೈಫಿಯತ್ತುಗಳಲ್ಲಿ ಈ ಕೋಟೆಯ ಬಗ್ಗೆ ಕೆಲವು ಮಾಹಿತಿಗಳು ದೊರೆಯುತ್ತವೆ. ಕಾಂಚಿಯ ಪಲ್ಲವರು, ಮಧುರೆಯ ಅರಸರು ಒಂದಾಗಿ ಪ್ರಬಲತರ ದುರ್ಗವೆಂದು ಹೆಸರಾಗಿದ್ದ ಉಚ್ಚಂಗಿದುರ್ಗವನ್ನು ತಮ್ಮ ಸೈನ್ಯದೊಡನೆ ಮುತ್ತಿಗೆ ಹಾಕಿದರು. ಸಂಗ್ರಾಮವಾದ ನಂತರ ದುರ್ಗವು ಶತ್ರುಗಳ ವಶವಾಯಿತು. ಆದರೂ ರಾಜ್ಯಲೋಲಪರಾದ ಕಾಂಚಿಯ ರಾಜರು, ಮಧುರೆಯ ಅರಸರು ತಮ್ಮಲ್ಲಿಯೇ ಸಂಧಾನಮಾಡಿಕೊಂಡು ದುರ್ಗವನ್ನು ಬಲಪಡಿಸಿ ದೇಶವನ್ನು ನೀರಾವರಿ ಯೋಜನೆಗಳಿಂದ ವೃದ್ಧಿ ಮಾಡಿಕೊಂಡರು. ಉಭಯತ್ರರು ಸೇರಿ ಒಂದು ಕೆರೆಯನ್ನು ನಿರ್ಮಿಸಿದರು. ಅದಕ್ಕೆ ಮೂರು ಕಡೆ ಕಟ್ಟೆಯನ್ನು ಕಾಂಚಿ ಮತ್ತು ಮಧುರೆಯ ಪಲ್ಲವರು ಕಟ್ಟಿಸಿದರು. ಕಾಂಚಿಯವರು ಗುಡ್ಡದ ಕೆಳಗಡೆಯಲ್ಲಿ ಒಂದು ಕೋಟೆಯನ್ನು ಕಟ್ಟಿಸಿದರು. ಅಲ್ಲಿ ಹನುಮಂತನನ್ನು ಸ್ಥಾಪನೆ ಮಾಡಿದರು. ಈತನಿಗೆ ಈಗಲೂ ಕಂಚಿಕೋಟೆ ಹನುಮಂತನೆಂದು ಹೆಸರಿದೆ. ಉಚ್ಚಂಗಿ ದುರ್ಗಕ್ಕೆ ವಾಯುವ್ಯ ದಿಕ್ಕಿನಲ್ಲಿ ಎರಡು ಮೈಲು ದೂರದಲ್ಲಿ ಕಂಚಿಯವರ ಮತ್ತು ಮಧುರೆಯವರ ಸೈನ್ಯ ಬಿಡಾರ ಮಾಡಿ ಜಯ ಸಂಪಾದಿಸಿತು.[2] ಕದಂಬ ವಂಶದ ಉಚ್ಚಂಗಿಯ ದೊರೆಗಳು ಸಿಂಹ ವಿಷ್ಣುವಿನ ವಂಶದ ಪಲ್ಲವರಿಂದ ನೆರವು ಪಡೆದರು. ಉಚ್ಚಂಗಿ ವಿಷ್ಣುವರ್ಮ ಕದಂಬನಿಗೆ ಶಾಂತಿವರ್ಮ ಪಲ್ಲವನು ಪಟ್ಟ ಕಟ್ಟಿದನು. ವಿಷ್ಣು-ವರ್ಮನ ಮಗನಾದ ಸಿಂಹವರ್ಮನಿಗೂ ಪಲ್ಲವರು ನೆರವು ನೀಡಿದರು. ನಂತರ ಕಾಡುವೆಟ್ಟ-ಯನ್ನು ಚಾಲುಕ್ಯರು ಸೋಲಿಸಿದರು.[3]

ಉಚ್ಚಂಗಿದುರ್ಗ ಮತ್ತು ಕದಂಬರು:

ಉಚ್ಚಂಗಿ ದುರ್ಗವನ್ನು ಆಳಿದ ರಾಜಸಂತತಿಗಳಲ್ಲಿ ಬನವಾಸಿ ಕದಂಬರ ಶಾಖೆಯೂ ಒಂದು. ಕದಂಬರ ಬಗೆಗೆ ಹೇಳಿಕೆಯೊಂದಿದೆ. ಉಚ್ಚಂಗಿ ದುರ್ಗದ ಸಮೀಪದ ಹಳ್ಳಿಯೊಂದರಲ್ಲಿ ಮಾದಕ್ಕನೆಂಬ ಮಹಿಳೆಯು ಕೋಟ್ಯಾಧೀಶಳಾಗಿದ್ದಳೆಂದೂ ಆಕೆಗೆ ಐಶ್ವರ್ಯಾಧಿದೇವತೆಯು ಪ್ರತ್ಯಕ್ಷಳಾಗಿ ಪಟ್ಟಾಭಿಷಿಕ್ತ ರಾಜನಿಂದ ಅಶ್ವಮೇಧಯಾಗವನ್ನು ಮಾಡಿಸಿ ಯಜ್ಞ ಕಾರ್ಯ ಕೈಕೊಳ್ಳಬೇಕೆಂದು ತಿಳಿಸಿದಳಂತೆ. (ಚಾಲುಕ್ಯರಲ್ಲಿ ಕೃಷ್ಣ ಹೆಸರಿನ ರಾಜರೇ ಇಲ್ಲ. ಚಾಲುಕ್ಯರ ಒಂದನೇ ಪುಲಿಕೇಶಿಯು ಬಾದಾಮಿಯಲ್ಲಿ ಅಶ್ವಮೇಧಯಾಗ ಮಾಡಿದ್ದನು. ಇದು ಉಚ್ಚಂಗಿ ದುರ್ಗಕ್ಕೆ ಸಂಬಂಧಿಸಿದ್ದಲ್ಲ). ಆದರಂತೆ ದೀರ್ಘಾವಧಿಯವರೆಗೆ ಜರುಗಿದ ಈ ಯಜ್ಞವು ಪರಿಸಮಾಪ್ತಿಯಾದರೂ ಯಜ್ಞವಾದ ಸ್ಥಳದಿಂದ ಬಂದ ಜನರು ಹಿಂತಿರುಗದೇ ಅಲ್ಲಿಯೇ ನೆಲಸಿದ ಕಾರಣ ಒಂದು ಗ್ರಾಮವು ನಿರ್ಮಾಣವಾಯಿತಂತೆ. ಅದು ಬೂದಿಹಾಳ ಎಂಬ ಹೆಸರಿನಿಂದ ಕರೆಯಲ್ಪಡುವ ಬೂದಿಹಾಳು ಉಚ್ಚಂಗಿದುರ್ಗದ ಈಶಾನ್ಯ ಭಾಗಕ್ಕೆ ಸುಮಾರು 10 ಮೈಲು ದೂರದಲ್ಲಿದೆ. ಇದರ ಪೂರ್ವಕ್ಕೆ 3 ಕಿ.ಮೀ. ದೂರದಲ್ಲಿರುವುದೇ ಮಾದಿಹಳ್ಳಿ. ಮಾದಕ್ಕಳಿಂದ ಈ ಹೆಸರು ಬಂದಿತೆಂಬ ವಾಡಿಕೆ ಇದೆ. ಮಾದಕ್ಕಳಿಂದ ಪ್ರೇರಿತನಾಗಿ ಕದಂಬ ರಾಜನಾದ ಕೃಷ್ಣವರ್ಮನು ಈ ಯಜ್ಞವನ್ನು ಚಿನ್ನಗಿರಿ ಮುಲ್ವಕ್ಕರ ಸಹಾಯದಿಂದ ಚಿಕ್ಕ ಹಗರಿ ಹಳ್ಳದ ದಂಡೆಯ ಮೇಲೆ ಮಾಡಿದನೆಂತಲೂ, ಬೂದಿಯಿಂದ ಆವೃತವಾದ ಈ ಗ್ರಾಮಕ್ಕೆ ಬೂದಿಹಾಳು ಎಂದು ಕರೆಯಲ್ಪಟ್ಟಿದೆ ಎಂಬ ಅಭಿಪ್ರಾಯವಿದೆ.

ಬನವಾಸಿಯನ್ನು ರಾಜಧಾನಿಯಾಗಿ ಮಾಡಿಕೊಂಡು ಆಳಿದ ಕದಂಬರು ಕ್ರಿ.ಶ. ನಾಲ್ಕನೆಯ ಶತಮಾನದಿಂದ ಆರನೆಯ ಶತಮಾನದ ಮಧ್ಯದವರೆಗೆ ಆಳಿದುದನ್ನು ಚರಿತ್ರೆಯಿಂದ ತಿಳಿಯಬಹುದಾಗಿದೆ. ಮಯೂರವರ್ಮನಿಂದ ಕ್ರಿ.ಶ. 345 ರಲ್ಲಿ ಆರಂಭವಾಯಿತೆನ್ನಲಾದ ಕದಂಬ ವಂಶವು ಕೊಂಗವರ್ಮ, ಭಗೀರಥ ವರ್ಮ ರಘುವರ್ಮ, ಕಾಕುತ್ಸವರ್ಮ, ಶಾಂತಿವರ್ಮ, ಕುಮಾರವರ್ಮ, ಮೊದಲನೆ ಕೃಷ್ಣ, ಮೃಗೇಶವರ್ಮ ಇತ್ಯಾದಿ ದೊರೆಗಳನ್ನೊಳಗೊಂಡಿತ್ತು. ಮುಂದೆ ಕಾಕುತ್ಸವರ್ಮನಿಗೆ ಕುಮಾರ ವರ್ಮ (ಮಂಧಾತ) ಮತ್ತು ಕೃಷ್ಣವರ್ಮ ಎಂಬ ಎರಡು ಮಕ್ಕಳಾಗಿ ಉಚ್ಚಂಗಿಯ ಅಧಿಪತಿಯಾದ ಕೃಷ್ಣವರ್ಮನು ತನ್ನ ಹಿರಿಯಣ್ಣನ ಮಗ ಮೃಗೇಶನಿಗೆ

ವಿರುದ್ಧವಾಗಿ ಪಲ್ಲವರ ಬೆಂಬಲ ಪಡೆದನು. ಹೀಗೆ ಕದಂಬರ ರಾಜ್ಯವು ಇಬ್ಭಾಗವಾಯಿತು. ಒಂದು ಭಾಗವು ತಲಕಾಡಿನ ಗಂಗರ ಬೆಂಬಲ ಪಡೆದ ಬನವಾಸಿ ಶಾಖೆ. ಮತ್ತೊಂದು ಪಲ್ಲವರ ಹಾಗೂ ಪಾರವಿ ಗಂಗರ ಬೆಂಬಲ ಪಡೆದ ಉಚ್ಚಂಗಿ ಶಾಖೆ.[4]

ಕೃಷ್ಣವರ್ಮನ ಮಗ ದೇವವರ್ಮ. ಕೃಷ್ಣವರ್ಮನು ಅಶ್ವಮೇಧಯಾಗ ಮಾಡಿದ. ಉಚ್ಚಂಗಿಯಲ್ಲಿ ಆಗ ಇನ್ನೊಬ್ಬ ಕದಂಬ ವಂಶದ ಮಾಂಡಲಿಕ ಕುಮಾರ (ಮಾಂಧಾತವರ್ಮ) ವರ್ಮನೆಂಬಾತನು ಆಳುತ್ತಿದ್ದನು. ಈತನು ಶಾಂತಿವರ್ಮನ ಇನ್ನೊಬ್ಬ ತಮ್ಮನಾಗಿದ್ದನು.[5] ಮೃಗೇಶವರ್ಮ, ಮಾಂಧಾತವರ್ಮ, ಬನವಾಸಿ, ಹಲಸಿ ಮತ್ತು ಉಚ್ಚಂಗಿದುರ್ಗ ಇವುಗಳನ್ನು ರಾಜಧಾನಿಯಾಗಿ ಮಾಡಿಕೊಂಡು ಆಳಿದರು. ಶಿವಮೊಗ್ಗೆಯ ತಾಂಬ್ರಶಾಸನದಲ್ಲಿ ಕುಮಾರವರ್ಮ ಮಹಾರಾಜನ ಮಗನಾದ ಮಾಂಧಾತವರ್ಮರಾಜನು ತನ್ನ ರಾಜಧಾನಿ ಉಚ್ಚಂಗಿ ದುರ್ಗದಲ್ಲಿದ್ದಾಗ ಆತ್ರೇಯ ಗೋತ್ರದ ತ್ರಿಯಂಬಕ ಸ್ವಾಮಿಯೆಂಬ ಬ್ರಾಹ್ಮಣನಿಗೆ ಕೇಗ್ಗ ಪಾಳ್ಗಳಿನಿ ಗ್ರಾಮದಲ್ಲಿ ಭೂದಾನ ಮಾಡಿದನೆಂದು ಹೇಳಿದೆ.[6] ಹರಿವರ್ಮನ ರಾಜಧಾನಿಗಳಲ್ಲೊಂದಾದ ಉಚ್ಚಂಗಿದುರ್ಗವು ರವಿವರ್ಮ, ಭಾನುವರ್ಮ ಮತ್ತು ಶಿವರಥರ ಆಳ್ವಿಕೆಗೆ ಉಚ್ಚಂಗಿ ಒಳಪಟ್ಟಿತು.[7]

ಈ ಮೇಲಿನ ಹೇಳಿಕೆಗಳಿಂದ ಉಚ್ಚಂಗಿ ದುರ್ಗವು ಮಾಂಧಾತವರ್ಮ (ಕ್ರಿ.ಶ.ಸು:448) ನಿಂದ ಹರಿವರ್ಮನ (ಕ್ರಿ.ಶ.ಸು:565) ವರೆಗೆ ಅಂದರೆ ಸುಮಾರು 117 ವರ್ಷಗಳವರೆಗೆ ಕದಂಬರ ಆಳ್ವಿಕೆಗೆ ಒಳಪಟ್ಟಿದ್ದಿತೆಂಬುದು ಸ್ಪಷ್ಟವಾಗುತ್ತದೆ. ಪ್ರಾಚೀನ ಶಾಸನಗಳಲ್ಲಿ ಇದನ್ನು ಉಚ್ಚಶೃಂಗಿ ಎಂದು ಕರೆದಿದ್ದು, ಈ ಉಚ್ಚಶೃಂಗಿಯೇ ಈಗಿನ ಉಚ್ಚಂಗಿ ಎಂದು ಗುರುತಿಸಬಹುದಾಗಿದೆ. ಕದಂಬಗಳಿಗೆ ಸಾವಿರಕ್ಕೆ ಸೇರಿರುವುದೂ ಈ ಮೇಲಿನ ಅಭಿಪ್ರಾಯಕ್ಕೆ ಕಾರಣವಾಗಿದೆ.

ಕದಂಬರು ಈ ರೀತಿಯ ಶಾಖೆಗಳನ್ನು ಮಾಡಿಕೊಂಡು ಹಾನಗಲ್ಲು, ಗೋವಾಗಳನ್ನು ಆಳಿದ್ದರಿಂದ ಉಚ್ಚಂಗಿ ದುರ್ಗವೂ ಒಂದು ಶಾಖೆಯಾಗಿದ್ದಿತು. ಇದು ಅವರ ಮೂರನೆಯ ರಾಜಧಾನಿಯಾಗಿತ್ತೆಂದು ತಿಳಿದು ಬರುವುದಲ್ಲದೆ, ಇಂದಿಗೂ ಹಳೆಯ ಕಾಲದ್ದೆನ್ನುವ ಕೋಟೆ, ದೇವಾಲಯ ಮತ್ತು ಇತರ ಸ್ಮಾರಕಾವಶೇಷಗಳು ಇಂದಿಗೂ ಇರುವುದನ್ನು ಕಾಣಬಹುದು.

## ಉಚ್ಚಂಗಿ ದುರ್ಗದಲ್ಲಿ ಗಂಗರು ಮತ್ತು ರಾಷ್ಟ್ರಕೂಟರು :

ಕದಂಬರ ನಂತರ ಕರ್ನಾಟಕದಲ್ಲಿ ಪ್ರಮುಖ ರಾಜಮನೆತನವೆಂದರೆ ಬಾದಾಮಿ ಚಾಲುಕ್ಯರು. ಇವರ ಬಗ್ಗೆ ಯಾವ ಕುರುಹುಗಳು ದೊರಕುವುದಿಲ್ಲ. ನಂತರ ಬಂದ ಗಂಗ ವಂಶದ ಎರಡನೇ ಮಾರಸಿಂಹನು ಚಾಲುಕ್ಯ ಚೂಡಾಮಣಿ ರಾಜಾಧಿತ್ಯನನ್ನು ಸೋಲಿಸಿದನೆಂದು ಶ್ರವಣ ಬೆಳಗೊಳದ ಶಾಸನದಲ್ಲಿ[8] ಉಲ್ಲೇಖವಾಗಿದ್ದು, ಕ್ರಿ.ಶ. 971 ರಲ್ಲಿ ಈ ಘಟನೆ ಘಟಿಸಿದೆ.[9]

ರಾಷ್ಟ್ರಕೂಟರ ಕಾಲದ ಶಾಸನಗಳೂ ಇಲ್ಲಿ ಅಲಭ್ಯವಾದರೂ, ಇವರ ಕಾಲಕ್ಕೆ ಸೇರಬಹುದಾದ ಮತ್ತು ಅವರ ಕಲಾ ಶೈಲಿಯನ್ನು ಹೋಲುವ ದೇವಸ್ಥಾನದ ಅಧಿಷ್ಠಾನಗಳು, ಕಂಬಗಳು ಮತ್ತು ಇತರೆ ಅವಶೇಷಗಳು ಕಂಡು ಬರುವವು.

<u>ಉಚ್ಚಂಗಿದುರ್ಗ ಮತ್ತು ನೊಳಂಬ ಪಲ್ಲವರು, ಕಲ್ಯಾಣ ಚಾಳುಕ್ಯರು :</u>

ನೊಳಂಬ ಪಲ್ಲವರು ಪಲ್ಲವ ವಂಶದ ಕಿರುಶಾಖೆಗೆ ಸೇರಿದವರು. ಇವರು ಕರ್ನಾಟಕದಲ್ಲಿ ಆಳಿದರು. ಖಟ್ವಾಂಗ ಧ್ವಜರಾಜ ಇವರು ಉಲಾಚನಂದನ ಅಥವಾ ತ್ರಿಲೋಚನ ಪಲ್ಲವನ ವಂಶಜರೆಂದೂ ಕಾಂಚಿಯ ಪ್ರಭುಗಳೆಂದು ಕರೆದುಕೊಂಡಿದ್ದಾರೆ. ಹೇಮಾವತಿ ಇವರ ರಾಜಧಾನಿ ಇವರ ಲಾಂಛನ ನಂದಿ. ಈ ಶಾಖೆಯ ಆಳ್ವಿಕೆ ಸು. ಕ್ರಿ.ಶ. 700ರಲ್ಲಿ ಆರಂಭವಾಗಿ ಕೊನೆಗೂ ಹೊಯ್ಸಳರಲ್ಲೂ ಕಲ್ಯಾಣ ಚಾಲುಕ್ಯರಲ್ಲೂ ಐಕ್ಯವಾಯಿತೆಂದು ಕಂಡುಬರುತ್ತದೆ. 10ನೇ ಶತಮಾನದ ಆರಂಭದ ಹೊತ್ತಿಗೆ ಇವರ ಆಡಳಿತ ಪ್ರದೇಶವು 32000ದ ಜಿಲ್ಲೆಯಾಯಿತು ಹಾಗಾಗಿ ನೊಳಂಬಳಿಗೆ 32000ಕ್ಕೆ ಬಳ್ಳಾರಿ, ಕೋಲಾರ, ಬೆಂಗಳೂರು, ಜಿಲ್ಲೆಯ ಭಾಗಗಳು ಸೇರಿಕೊಂಡವು (ಈ ವಂಶದ ಸ್ಥಾಪಕ ತ್ರಿನಯನ ಪಲ್ಲವ).[10] ಆಗ ಉಚ್ಚಂಗಿ ದುರ್ಗವು ನೊಳಂಬರ ಆಡಳಿತಕ್ಕೆ ಒಳಗಾದ ಪ್ರದೇಶವಾಗಿರಬಹುದು. (ಇದೇ ಸಮಯದಲ್ಲಿ ನೊಳಂಬರು ತಮ್ಮ ನಿಷ್ಠೆಯನ್ನು ಕಲ್ಯಾಣದ ಚಾಲುಕ್ಯರಿಗೆ ವರ್ಗಾಯಿಸಿದಂತೆ ಕಂಡುಬರುತ್ತದೆ.) ಬಳ್ಳಾರಿ ಜಿಲ್ಲೆಯ ಕಂಪಿಲಿಯಲ್ಲಿ ಆಡಳಿತ ಮಾಡಿದ ಜಗದೇಕಮಲ್ಲ, ನೊಳಂಬ ಪಲ್ಲವನು, ಉದಯಾದಿತ್ಯ ನೊಳಂಬ ಪಲ್ಲವ ಪೆರ್ಮಾಡಿಯಿಂದ ಈ ಕಾಲಕ್ಕೆ ಉಚ್ಚಂಗಿ ದುರ್ಗ ನೊಳಂಬ ಪಲ್ಲವರಿಗೆ ಸೇರಿದ್ದಿರಬಹುದು.

ಬಹುಶಃ ಕ್ರಿ.ಶ. 1064ಕ್ಕಿಂತ ಮುಂಚೆಯೇ ಕಲ್ಯಾಣ ಕಾಲಕ್ಯರಿಗೆ ನೊಳಂಬವಾಡಿ ಸೇರ್ಪಟ್ಟು ನೇರ ಆಡಳಿತಕ್ಕೆ ಒಳಪಟ್ಟಿರಬಹುದೆಂಬುದು ತಿಳಿದುಬರುತ್ತದೆ.[11] ತನ್ನ ತಂದೆಯ ಅಣತಿಯಂತೆ ವಿಷ್ಣುವರ್ಧನ ವಿಜಯಾದಿತ್ಯನು ಕ್ರಿ.ಶ. 1067ರವರೆಗೆ ನಿರಂತರವಾಗಿ ನಾಲ್ಕು ವರ್ಷ ದಕ್ಷಿಣ ಕರ್ನಾಟಕದ ದಿಗ್ವಿಜಯದಲ್ಲಿ ನಿರತನಾಗಿದ್ದನು. ಮತ್ತು ಈ ಅವಧಿಯಲ್ಲಿ ಅವನು ಹೆಚ್ಚಿನ ಸಮಯವನ್ನು ತನ್ನ ನೊಳಂಬ ರಾಜ್ಯದ ನೆಲೆವೀಡಾದ ಕಂಪಲಿಯಲ್ಲಿ ಬೀಡು ಬಿಟ್ಟು ಇರುತ್ತಿದ್ದನು. ಮೂರು ಶಾಸನಗಳು ಉಚ್ಚಂಗಿಗೆ ಸೇರಿದ್ದು ಉಚ್ಚಂಗಿ 30 ಕೂಡ ನೊಳಂಬವಾಡಿಗೆ ರಾಜಧಾನಿಯಾಗಿತ್ತೆಂಬುದು ತಿಳಿದುಬರುತ್ತದೆ.[12]

ಕ್ರಿ.ಶ. 1064ರಲ್ಲಿ ಆರ್ಮಡಿ ವಿಕ್ರಮಾದಿತ್ಯನ ಸೋದರ ವಿಷ್ಣುವರ್ಧನ ವಿಜಯಾದಿತ್ಯನು ತಂದೆ ಸೋಮೇಶ್ವರನ ಕೆಳಗೆ ನೊಳಂಬವಾಡಿ 32000ರ ಮಾಂಡಳಿಕನಾಗಿದ್ದನು.[13]

ಚೋಳರು ಚಾಲುಕ್ಯರು ರಾಜ್ಯದ ಮೇಲೆ ಆರಂಭಿಸಿದ ದಂಡ ಯಾತ್ರೆಯು ಕ್ರಿ.ಶ. 1064ರಲ್ಲಿ ಕೂಡಲಸಂಗಮದ ಬಳಿ ಚಾಲುಕ್ಯರನ್ನು ಸೋಲಿಸಿ ಕೊನೆಗೊಂಡಾಗ ಕಂಪಲಿಯು ಸೂರೆಯಾಯಿತು. ಇದರಿಂದ ನೊಳಂಬವಾಡಿ ಮಂಡಲದ ರಾಜಧಾನಿ ಬದಲಾಯಿತು. ಉಚ್ಚಂಗಿಯ ಪಾಂಡ್ಯರನ್ನು ಈ ಪ್ರದೇಶದ ಮಾಂಡಳಿಕರಾಗಿ ನೇಮಿಸಲಾಯಿತೆಂದು ತಿಳಿದು ಬರುತ್ತದೆ. ಉಚ್ಚಂಗಿ ದುರ್ಗದ ಪೂರ್ವ ದಿಕ್ಕಿನ ಹೊಲದಲ್ಲಿರುವ ಶಿಲಾಶಾಸನದಲ್ಲಿ ನೊಳಂಬ ಪಲ್ಲವ ಪೆರ್ಮಾಡಿ ಜಯಸಿಂಘನ ಉಲ್ಲೇಖವನ್ನು ಗಮನಿಸಲಾಗಿದೆ.

''ಉಚ್ಚಂಗಿ ಕೋಟೆಯ ಮೇಗಣ ತ್ರೈಲೇಶ್ವರ ದೇವರ ಭೋಗಕ್ಕೆಂ
ಗಂಟಿಗನ ಕೆರೆಯಂ ಶ್ರೀ ಮತ್ತ್ರೈಲೋಕ್ಯಮಲ್ಲ ನೊಳಂಬ
ಪಲ್ಲವ ಪೆರ್ಮಾಡಿ ಜಯಸಿಂಘ ದೇವರು ಬಿಟ್ಟುಕೊಟ್ಟರು''

ನೊಳಂಬ ಪ್ರದೇಶವು ನೊಳಂಬ ಪಲ್ಲವರ ನಂತರ ಚಾಳುಕ್ಯರಿಗೆ ನೇರ ಆಡಳಿತಕ್ಕೆ ಒಳಪಟ್ಟಿತ್ತು. ಆಗ ಚಾಳುಕ್ಯರ ಆಡಳಿತಕ್ಕೆ ನೊಳಂಬರಿಂದ ಉಚ್ಚಂಗಿದುರ್ಗವು ಒಳಪಡುತ್ತದೆ. ವಿಷ್ಣುವರ್ಧನ ವಿಜಯದಿತ್ಯದೇವ ಹಾಗೂ ನೊಳಂಬ ಪೆರ್ಮಾಡಿ ಜಯ ಸಿಂಘದೇವನು, ಮಾಂಡಳೀಕರಾಗಿ ನೊಳಂಬವಾಡಿಯನ್ನು ಆಳುತ್ತಿದ್ದಾಗ ಉಚ್ಚಂಗಿದುರ್ಗ ಇವರಿಗೆ ಪ್ರಮುಖ ಕೇಂದ್ರವಾಗಿದ್ದಿತ್ತೆಂದು ತಿಳಿದುಬರುತ್ತದೆ.

ಇವರ ಕಾಲದಲ್ಲಿಯೇ ಉಚ್ಚಂಗಿ ನೊಳಂಬವಾಡಿ 32000ಕ್ಕೆ ಕೇಂದ್ರವಾಗಿದ್ದು ರಾಜಧಾನಿಯಾಗಿರಬಹುದಾದುದು ತಿಳಿದುಬರುತ್ತದೆ. ನಂತರ ಪಾಂಡ್ಯರು ಇದನ್ನು ಮುಂದುವರೆಸಿದರು. ವಿಷ್ಣುವರ್ಧನ ವಿಜಯಾದಿತ್ಯದೇವನು ಉಚ್ಚಂಗಿದುರ್ಗದಲ್ಲಿ ದೇವಾಲಯಗಳನ್ನು ಕಟ್ಟಿಸಿದ ಮತ್ತು ಬಾವಿಗಳನ್ನು ತೋಡಿಸಿದ್ದ ದಾನ ದತ್ತಿಗಳನ್ನುಬಿಟ್ಟಿದ್ದು ವಿವರವಾಗಿ ಕಂಡುಬರುತ್ತದೆ. ಮತ್ತು ನೊಳಂಬ ಪಲ್ಲವ ಪೆರ್ಮಾಡಿ ಜಯಸಿಂಘನು ತ್ರೈಲೇಶ್ವರ ದೇವರ ಭೋಗಕ್ಕೆ ಗಂಟಿಗನ ಕೆರೆಯನ್ನು ದಾನಬಿಟ್ಟ ವಿಷಯ ಉಚ್ಚಂಗಿ ದುರ್ಗದ ಹೊಲವೊಂದರಲ್ಲಿರುವ ಶಾಸನದಿಂದ ತಿಳಿದುಬರುತ್ತದೆ.

## ಉಚ್ಚಂಗಿದುರ್ಗ ಮತ್ತು ಪಾಂಡ್ಯರು :

ಕರ್ನಾಟಕದ ಮುಖ್ಯವಾದ ಅಧೀನ ರಾಜಕುಲಗಳಲ್ಲಿ ಉಚ್ಚಂಗಿಯ ಪಾಂಡ್ಯ ಕುಲವೂ ಒಂದಾಗಿದೆ. ಪಾಂಡ್ಯರನ್ನು ಚಂದ್ರವಂಶೀಯರೆಂದು ಹೇಳಿಕೊಂಡಿದ್ದಾರೆ. ಇವರು ಸಪ್ತ ಕೊಂಕಣಗಳಲ್ಲಿ ಒಂದಾದ ಹೈವೆಯ ಅರಸರಾಗಿದ್ದರೆ. ಇವರ ರಾಜಧಾನಿ ಸಿಸುಗುಳಿ. ಕ್ರಿ.ಶ. 1113ರ ಪಾಂಡ್ಯರಾಜನೊಬ್ಬನು ಗೋಕರ್ಣಪುರದ ಅರಸನೆಂದೂ ಕೊಂಕಣರಕ್ಷಕನೆಂದೂ ಹೇಳಿಕೊಂಡಿದ್ದಾನೆ. ಪಶ್ಚಿಮ ಚಾಲುಕ್ಯ ರಾಜನಾದ ಜಯಸಿಂಹನು ಸಪ್ತ ಕೊಂಕಣಗಳನ್ನು ಜಯಿಸಿದ ಮೇಲೆ, ಪಾಂಡ್ಯರು ಹಿಂದಿನ ಮೈಸೂರು ಸಂಸ್ಥಾನದ ಬಡಗಣ ಗಡಿಯ ಬಳ್ಳಾರಿ ಜಿಲ್ಲೆಯ ಈಶಾನ್ಯಕ್ಕಿರುವ ಗಿರಿದುರ್ಗವಾದ ಉಚ್ಚಂಗಿಗೆ ತೆರಳಿದನು. ಈ ಪಾಂಡ್ಯರು ನೊಳಂಬವಾಡಿ ಮೂವತ್ತೆರಡು ಸಾವಿರದ ನಾಡಿನ ಅರಸರಾಗಿದ್ದರು. ಮೊಗಯ್ಯ ಇಲ್ಲವೆ ಆದಿತ್ಯದೇವ ಎಂಬವನು ಪಾಂಡ್ಯ ಕುಲದ ಸ್ಥಾಪಕ. ಅವನ ಮಗ ಚೇದಿರಾಜ. ಚೇದಿರಾಜನ ಮಗ ಪಾಂಡ್ಯ ಈ ಪಾಂಡ್ಯನು ಚೇದಿಕುಲದ ಅರಸರನ್ನು ಸದೆಬಡಿದವನೆಂಬ ಪ್ರತೀತಿಯಿದೆ. ಪಾಂಡ್ಯನು ಚೇದಿದೇಶದ ಅಭಿಮಾನಿಯಾದುದರಿಂದ ಇವನಿಗೆ ಪಾಂಡ್ಯನೆಂಬ ಹೆಸರು ಬಂದುದಾಗಿರಬೇಕು ಎಂದು ಶಾಸನೋಕ್ತಿಗಳಿಂದ ಊಹಿಸಬಹುದು.

ತ್ರಿಭುವನಮಲ್ಲ ಪಾಂಡ್ಯನು ಚಾಲುಕ್ಯ ತ್ರಿಭುವನ ಮಲ್ಲನ ಮಾಂಡಲಿಕನಾಗಿ ಕ್ರಿ.ಶ. 1083ರಲ್ಲಿ ನೊಳಂಬವಾಡಿಯನ್ನು ಆಳುತ್ತಿದ್ದನು.[14] ಕ್ರಿ.ಶ. 1101ರಲ್ಲಿ ಬಲ್ಲಕುಂದ 300 ನಾಡಿಗೂ ಮಾಂಡಲಿಕನಾಗಿದ್ದನು. ದಾವಣಗೆರೆ ಸಮೀಪದಲ್ಲಿರುವ ಬೆಳ್ಳೂರು ಅವರ ರಾಜಧಾನಿಯಾಗಿರಬಹುದು. ನಂತರ ಬಂದ ರಾಯ ಪಾಂಡ್ಯನಿಗೂ ಇದು ರಾಜಧಾನಿಯಾಗಿದ್ದು ನೊಳಂಬವಾಡಿಯನ್ನೂ ಶಾಂತಲಿಗೆಯನ್ನೂ ಆಳಿದನು. ರಾಯ ಪಾಂಡ್ಯನಿಗೆ ಪಂಡಿತ ಪಾಂಡ್ಯ ವೀರ ಪಾಂಡ್ಯ, ವಿಜಯ ಪಾಂಡ್ಯ ಇಲ್ಲವೆ ರಾಮದೇವ ಎಂಬ ಮೂವರು ಮಕ್ಕಳಿದ್ದರು.[15] ವೀರ ಪಾಂಡ್ಯನು ಉಚ್ಚಂಗಿಯನ್ನು ರಾಜಧಾನಿಯಾಗಿ ಮಾಡಿಕೊಂಡನು. ಇವನು ನೊಂಮ್ಯೇಶ್ವರ ದೇವರನ್ನು ಪ್ರತಿಸ್ಥಾಪಿಸಿ, ಅನೇಕ ದಾನ ದತ್ತಿಗಳನ್ನು ನೀಡಿದನು.[16] ಮುಂದಿನ ಅರಸನಾದ ವಿಜಯ ಪಾಂಡ್ಯನು ಪ್ರಭಾವಿ ಶಾಲಿಯಾಗಿದ್ದನೆಂದು ತೋರುವುದು ಇವನಿಗೆ ಉಚ್ಚಂಗಿಯೇ ಪ್ರಮುಖಕೇಂದ್ರವಾಗಿತ್ತು.[17]

ಕಲ್ಯಾಣದ ಚಾಳುಕ್ಯರು ಆಳ್ವಿಕೆ ಮಾಡುವಾಗ ನೊಳಂಬವಾಡಿ ಮೂವತ್ತೆರಡು ಸಾವಿರ ಇದೊಂದು ವಿಭಾಗವಾಗಿತ್ತು, ಇದರಲ್ಲಿ ಉಪವಿಭಾಗಗಳಾಗಿ ಕದಂಬಗಳಿಗೆ ಸಾವಿರ, ಸಿಂದವಾಡಿ ಸಾವಿರ, ಕೋಗಳಿ ಐನೂರು ಇತ್ಯಾದಿಗಳಿದ್ದುವು. ನೊಳಂಬವಾಡಿ ಮೂವತ್ತೆರಡು ಸಾವಿರಕ್ಕೆ ಮಹಾಮಂಡಳೇಶ್ವರರಾಗಿ ಕಲ್ಯಾಣ ಚಾಲುಕ್ಯರಿಗೆ ಸಾಮಂತರಾಗಿ ಉಚ್ಚಂಗಿದುರ್ಗವನ್ನು ಕೇಂದ್ರ ಮಾಡಿಕೊಂಡು ಪಾಂಡ್ಯರು ಆಳ್ವಿಕೆ ಮಾಡಿದಂತೆ ಶಾಸನಗಳಿಂದ ತಿಳಿದುಬರುತ್ತದೆ. ತ್ರಿಭುವನ ಮಲ್ಲಪಾಂಡ್ಯ[18], ರಾಯಪಾಂಡ್ಯ[19], ವೀರಪಾಂಡ್ಯ[20] ಮತ್ತು ವಿಜಯಪಾಂಡ್ಯರು[21] ಉಚ್ಚಂಗಿಯನ್ನು ಕೇಂದ್ರಮಾಡಿಕೊಂಡು ನೊಳಂಬವಾಡಿ ಮೂವತ್ತೆರಡು ಸಾವಿರದಲ್ಲಿ ಆಳ್ವಿಕೆ ನಡೆಸಿದರು. ವಿಜಯ ಪಾಂಡ್ಯನು ಉಚ್ಚಂಗಿಯ ಪಾಂಡ್ಯರಲ್ಲಿಯೇ ಪ್ರಮುಖನಾದುದನ್ನು ಊಹಿಸಬಹುದು.

ಇವನು ಸಪ್ತ ಕೊಂಕಣ ಕೊಂಕಣಗಳನ್ನು ಜಯಿಸಿ ಕನಕಪರ್ವದಲ್ಲಿ ಮತ್ಸ್ಯ ಲಾಂಛನದ ಜಯಸ್ತಂಭವನ್ನು (ಕರ್ನಾಟಕ ಇತಿಹಾಸದರ್ಶನ ಪು 214) ನಡೆಸಿದ್ದನೆಂದು ಉಲ್ಲೇಖವು ಬಡಗಿಮುಟ್ಟ ಶಾಸನವೊಂದರಲ್ಲಿ ತಿಳಿದುಬರುತ್ತದೆ. ಇದೇ ಶಾಸನದಲ್ಲಿ ಅವನ ಬಿರುದುಗಳು ಉಲ್ಲೇಖವಾಗಿರುವುದನ್ನು ಕಾಣಬಹುದಾಗಿದೆ.

> "ಚಿತಾಂತಃಕರಣಂ ಯಾದವಾಭರಣಂ ಪಾಂಡ್ಯ ಕುಳಕಮಳ ಮಾರ್ತಂಡಂ ಪರಿಚ್ಛೇದಗಂಡಂ ರಾಜಿಗ ಬೊಳಮನೋಭಂಗಂ ಸಾಹಸೋತ್ತುಂಗಂ ನಿಖಿಳನಾಮಾವಳೀ ವಿರಾಜಿತಮಪ್ಪ ಶ್ರೀ ಮನ್ಮಹಾಮಂಡಳೇಶ್ವರು ವಿಜಯಪಾಂಡ್ಯದೇವರು."

ಹೊಯ್ಸಳರ 3ನೇ ಬಲ್ಲಾಳನು ಕ್ರಿ.ಶ 1177ರಲ್ಲಿ ಪ್ರಯಾಸಮಾನವಾಗಿ ಉಚ್ಚಂಗಿದುರ್ಗವನ್ನು ವಿಜಯಪಾಂಡ್ಯನನ್ನು ಸೋಲಿಸುವದರೊಂದಿಗೆ ವಶಪಡಿಸಿಕೊಂಡನು. ಮುಂದೆ ಉಚ್ಚಂಗಿದುರ್ಗವು ಕಾಲಾಂತರದಲ್ಲಿ ಹೊಯ್ಸಳರಿಗೆ ಸೇರಿದ್ದು ಕಾಣಬರುವುದು[22].

ಉಚ್ಚಂಗಿಯ ಪಾಂಡ್ಯರೆಂದೇ ಕರೆಸಿಕೊಂಡ ಇವರು ಸು. 137 ವರ್ಷಗಳ ಕಾಲ ಉಚ್ಚಂಗಿ ನೆಲೆವೀಡಿನಿಂದ ನೊಳಂಬವಾಡಿ 32000ರಲ್ಲಿ ಆಳ್ವಿಕೆಯನ್ನು ಮಾಡಿದರು. ಇವರ ನಂತರ ಉತ್ತರ ಕರ್ನಾಟಕ ಚಾಳುಕ್ಯರಿಂದ ಕರ್ನಾಟಕದ ದಕ್ಷಿಣಭಾಗದ ಹೊಯ್ಸಳರಿಗೆ ಉಚ್ಚಂಗಿದುರ್ಗವನ್ನು ಹಸ್ತಾಂತರಿಸುವದರೊಂದಿಗೆ, ಒಂದು ಪ್ರಬಲವಾದ ಕರ್ನಾಟಕದ ರಾಜಸಂತತ ಚಾಳುಕ್ಯರ ಪತನಗೆಹಾದಿ ಮತ್ತು, ಚಾಳುಕ್ಯರ ರಾಜ್ಯದಲ್ಲಿ ಹೊಯ್ಸಳರ ಪ್ರವೇಶವು ಪ್ರಮುಖವಾದ ಹಂತವಾಗಿದ್ದರಿಂದ ಹೊಯ್ಸಳರಿಗೆ ಉಚ್ಚಂಗಿದುರ್ಗವನ್ನು ವಶಪಡಿಸಿಕೊಂಡಿದ್ದು ಒಂದು ಪ್ರತಿಷ್ಠೆಯ ಸಂಗತಿಯು ಆಗಿರಬಹುದಾಗಿದೆ.

ಉಚ್ಚಂಗಿದುರ್ಗ ಮತ್ತು ಹೊಯ್ಸಳರು :

ಕಲ್ಯಾಣಿ ಚಾಲುಕ್ಯರ ನಂತರ ಕರ್ನಾಟಕವನ್ನು ಆಳಿದ ರಾಜ ಮನೆತನಗಳಲ್ಲಿ ಹೊಯ್ಸಳರು ಪ್ರಮುಖರು. ಇವರು ಕ್ರಿ. ಶ. 10 ನೇ ಶತಮಾನದಿಂದ 14ನೇ ಶತಮಾನದ ಮಧ್ಯ ಭಾಗದವರೆಗೆ ಅಂದರೆ ಸುಮಾರು ಮೂರು ಶತಮಾನಗಳ ಕಾಲ ರಾಜ್ಯವಾಳಿದರು. ಈ ಸಂತತಿಯ ಆಳ್ವಿಕೆಯ ಪ್ರಾರಂಭದಲ್ಲಿ ಕರ್ನಾಟಕದಲ್ಲಿ ಕಲ್ಯಾಣ ಚಾಲುಕ್ಯರು, ತಮಿಳುನಾಡಿನಲ್ಲಿ ಚೋಳರು ಪ್ರಬಲರಾಗಿದ್ದರು. ಈ ಎರಡೂ ರಾಜ್ಯಗಳ ಮಧ್ಯ ಸದಾ ಯುದ್ಧಗಳು ಜರುಗುತ್ತಿದ್ದವು. ಇಂಥಹ ಸನ್ನಿವೇಶದಲ್ಲಿ ಹೊಯ್ಸಳರು ಬೆಳಕಿಗೆ ಬಂದರು.

ಒಂದು, ಎರಡು ಮತ್ತು ಮೂರನೇ ಬಲ್ಲಾಳರು, ಒಂದನೇ ನರಸಿಂಹ ಸೋಮೇಶ್ವರ, ಎರಡು ಮತ್ತು ಮೂರನೇ ನರಸಿಂಹ ಹೊಯ್ಸಳ ದೊರೆಗಳಲ್ಲಿ ಪ್ರಮುಖರು. ಎರಡನೇ ವಿನಯಾದಿತ್ಯನ ಮರಣಾನಂತರ ಅವನ ಮೊಮ್ಮಗನಾದ ಒಂದನೇ ಬಲ್ಲಾಳನು ಪಟ್ಟಕ್ಕೆ ಬಂದನು. ಇವನು ಕ್ರಿ.ಶ. 1100 ರಿಂದ 1108 ರ ವರೆಗೆ ರಾಜ್ಯವಾಳಿದನು. ಇವನೂ ಕೂಡ ಚಾಲುಕ್ಯರ ಚಕ್ರವರ್ತಿ ಆರನೇ ವಿಕ್ರಮಾದಿತ್ಯನ

ಸಾಮಂತನಾಗಿದ್ದನು. ಬಲ್ಲಾಳನು ತನ್ನ ತಮ್ಮ ಬಿಟ್ಟಿ ದೇವನೊಂದಿಗೆ ಉಚ್ಚಂಗಿಯ ಪಾಂಡ್ಯರ ರಾಜ್ಯದ ಮೇಲೆ ದಂಡೆತ್ತಿ ಹೋಗಿ ಆ ರಾಜ್ಯದ ಅಪಾರ ಐಶ್ವರ್ಯವನ್ನು ಸೂರೆಗೊಂಡನು.[23] ತಲಕಾಡಿನ ವಿಜಯದಿಂದ ಸ್ಫೂರ್ತಿಗೊಂಡ ವಿಷ್ಣುವರ್ಧನನು ಚಾಲುಕ್ಯರ ಅಧೀನದಿಂದ ಸ್ವತಂತ್ರನಾಗಲಿಚ್ಛಿಸಿದನು. ಕ್ರಿ.ಶ: 1117 ರಲ್ಲಿ ಚಾಲುಕ್ಯರ ಸಾಮಂತರಾಗಿದ್ದ ಉಚ್ಚಂಗಿಯ ಪಾಂಡ್ಯರನ್ನು ಚಿತ್ರದುರ್ಗ ಜಿಲ್ಲೆಯ ದುಮ್ಮಿ ಎಂಬ (ಹೊಳಲ್ಕೆರೆ ತಾಲೂಕು) ಸ್ಥಳದಲ್ಲಿ ಸೋಲಿಸಿದನು. ತನ್ನ ಉತ್ತರಾಧಿಕಾರಿಯಾಗಲಿದ್ದ ಮಗುವು ಜನಿಸಿದ್ದರಿಂದ ಹರ್ಷಚಿತ್ತನಾದ ವಿಷ್ಣುವರ್ಧನನು ಪುನ: ತನ್ನ ದಂಡಯಾತ್ರೆ ಕೈಗೊಂಡನು. ತನ್ನ ಸೈನ್ಯವನ್ನು ತನ್ನ ರಾಜ್ಯದ ಉತ್ತರ ಗಡಿಯಾಚೆಗೆ ನಡೆಸಿ ಉಚ್ಚಂಗಿಯ ಪಾಂಡ್ಯರನ್ನು, ಬನವಾಸಿಯ ಕದಂಬರನ್ನು ಪುನ: ಸೋಲಿಸಿದನು.

ಬಲ್ಲಾಳನು ಚೆಂಗಾಳ್ವರಿಗಿಂತಲೂ ಹೆಚ್ಚಿನ ತೊಂದರೆಯನ್ನು ಉಚ್ಚಂಗಿಯ ಪಾಂಡ್ಯರಿಂದ ಎದುರಿಸಬೇಕಾಯಿತು. ಉಚ್ಚಂಗಿಯ ಕೋಟೆಯು ಅಭೇದ್ಯವಾದುದಾಗಿತ್ತು. ಅಂತಹ ಕೋಟೆಯನ್ನು ವಶಪಡಿಸಿಕೊಳ್ಳಲು ಬಲ್ಲಾಳನು ನಿರ್ಧರಿಸಿ, ಅಪಾರ ಸೈನ್ಯದೊಂದಿಗೆ ಹೋಗಿ ಪಾಂಡ್ಯರ ರಾಜ ಕಾಮದೇವನನ್ನು ಸೋಲಿಸಿ ದುರ್ಗವನ್ನು ವಶಪಡಿಸಿಕೊಂಡನು. ಸೋತ ಕಾಮದೇವನು ಬಲ್ಲಾಳನಲ್ಲಿ ಕ್ಷಮಾರ್ಪಣೆ ಕೇಳಲು, ಅವನ ರಾಜ್ಯವನ್ನು ಅವನಿಗೆ ಹಿಂತಿರುಗಿ ಕೊಟ್ಟನು. ಈ ವಿಜಯದಿಂದ ಬಲ್ಲಾಳನು ಅನೇಕ ಬಿರುದುಗಳನ್ನು ಧರಿಸಿದನು. ಮೊದಲಿನಿಂದ ಬಂದ ಬಿರುದಾವಳಿಗಳಂತೆ ಶ್ರೀಪೃಥ್ವಿವಲ್ಲಭ ಮಹಾರಾಜಾಧಿರಾಜ ರಾಜಪರಮೇಶ್ವರ, ಯಾದವ ಕುಳಂಬರದ್ಯುಮಣಿ, ಸರ್ವಜ್ಞ ಚೂಡಾಮಣಿ, ಮಲೆರಾಜ ರಾಜ ಮಲಪರೊಳು ಗಂಡ, ಗಂಡ ಭೇರುಂಡ ಕದನ ಪ್ರಚಂಡ, ಶೂರ, ಏಕಾಂಗಿವೀರ, ಶನಿವಾರ ಸಿದ್ಧಿ, ಗಿರಿದುರ್ಗಮಲ್ಲ, ಚಲದಂಕರಾಮ, ಎಂದಿದ್ದವು.[24]

ಡಾ: ಸಿ.ಎಸ್. ಪಾಟೀಲರು (ಇತಿಹಾಸ ದರ್ಶನ ಪುಟ:159) ಉಚ್ಚಂಗಿ ದುರ್ಗ ಗೆದ್ದುದರಿಂದ ಹೊಯ್ಸಳರಿಗೆ ಶನಿವಾರ ಸಿದ್ಧಿ, ಗಿರಿದುರ್ಗಮಲ್ಲ ಎಂಬ ಬಿರುದು ಬಂದವೆಂದು ಅಭಿಪ್ರಾಯಪಟ್ಟಿರುತ್ತಾರೆ. ಆದರೆ ಹೊಯ್ಸಳರಿಗಿಂತ ಮೊದಲೇ ಈ ಬಿರುದು ಬಂದಿರಬಹುದಾದುದಕ್ಕೆ ಈ ಕೆಳಗಿನ ಶಾಸನಗಳನ್ನು ಗಮನಿಸಬಹುದಾಗಿದೆ.

ಶನಿವಾರ ಸಿದ್ಧಿಯ ಮೂಲವನ್ನು ಹುಡುಕುವಾಗ ಶಿಲಾಹಾರ ರಾಜನಾದ ಅಪರಾಜಿತದೇವನ ಬಿರುದುಗಳಲ್ಲಿ ಶನಿವಾರ ವಿಜಯ ಎಂಬುದು ಸುಮಾರು ಕ್ರಿ.ಶ. 997 ರ ಶಾಸನದಲ್ಲಿ ಈ ರೀತಿ ಮೂಡಿಬಂದಿದೆ.[25]

ಸಮಧಿಗತ ಪಂಚಮಹಾ ಸವ್ದ(ಬ್ದ)ಮಹಾ
ಸಾಮಂತಾಧಿಪತಿ ಕಗರಪುರ ಪರಮೇಶ್ವರ ಶಿಲಾರ
ನರೇಂದ್ರ ಜೀಮೂತವಾಹನಾನ್ವಯ ಪ್ರಸೂತ
ಸುವರ್ಣ ಗರುಡ ಧ್ವಜ ಅಭಿಮಾನ ಮಯೂರಧರಿ
ಮೂಳಗಳ ಗಂಡ ಕಂದರ್ಪ ಸಹಜ ವಿದ್ಯಾಧರ
ಅಪರ ದಿಗ್ವಧೂ ತಿಲಕ ನನ್ನಿ ಸಮುದ್ರ ಪ್ರತಾಪ
ಮಾರ್ತಾಂಡ ಸನಿವಾರ ವಿಜಯ ಆದಿ ಸಮಸ್ತ ರಾವಳಿ
ಸಮಲಂಕೃತ ಮಹಾ ಮಂಡಳೇಶ್ವರ ಶ್ರೀಮತ್
ಅಪರಾಜಿತ ದೇವರಾಜ[26]

ಮತ್ತು ಶನಿವಾರ ಸಿದ್ಧಿ, ಗಿರಿದುರ್ಗಮಲ್ಲ ಎಂಬ ಬಿರುದುಗಳನ್ನು ಕಲಚೂರಿಯ ಪೆರ್ಮಾಡಿ ಹಾಗೂ ಅವನ ಮಗನಾದ ಬಿಜ್ಜಳನೂ ಹೊಂದಿದ್ದುದು ಈ ಕೆಳಗಿನ ಶಾಸನದಿಂದ ತಿಳಿದುಬರುತ್ತದೆ.

ದಾರಕು ತೂಂತರ್ಜ ನಿಗೂರ್ಯೇಕ್ಷಣಂ ಕವಿಚುರಿ ಕುಳಕಮಳ
ಮಾರ್ತಾಂಡಂ ಕದನ ಪ್ರಚಂಡದ ಮಾನಕನ ರಾಚಳಂ ಸುಭದ
ರಾದಿತ್ಯಂ ಕಲಿಗಳಂ ಕುಳಂ ಗಜ ಸಮಾಶ್ರಿತ ಶರಣಾಗತ
ವಜ್ರ ಪಂಜರ ಪ್ರತಾಪ ಲಂಕೇಶ್ವರಂ ಪರನಾರೀ ಸೋದರಂ
ಶನಿವಾರ ಸಿದ್ಧಿ ಗಿರಿದುರ್ಗ ಮಲ್ಲಂ ಛಲದಂಕ ರಾಮಂ
ವೈರೀಭ ಕಣ್ಠೀರವಂ ನಿಶ್ಶಂಕಮಲ್ಲ ನಾಮಾದಿ ಪ್ರಶಸ್ತಿ
ಸಹಿತಂ ಶ್ರೀ ಮದ್ಭುಜಬಳ ಚಕ್ರವರ್ತಿ ತ್ರಿಭುವನಮಲ್ಲ
ವಿಜ್ಜಣದೇವ :[27]

ಇಲ್ಲಿ ಚಾಲುಕ್ಯರನ್ನು ಹತ್ತಿಕ್ಕಿ ತಾನೇ ಚಕ್ರವರ್ತಿ ಎಂದು ಘೋಷಿಸಿಕೊಂಡು, ತನ್ನ ತಂದೆ ತಳೆದಿದ್ದ ಶನಿವಾರ ಸಿದ್ಧಿ, ಗಿರಿದುರ್ಗಮಲ್ಲ ಬಿರುದುಗಳನ್ನು ಇವನೂ ಪಡೆದದ್ದಲ್ಲದೆ ಅವನು ಮಗ ಸೋಯಿದೇವನೂ ಹೊಂದಿದ್ದನು.[28] ಮುಂದೆ ಕ್ರಮವಾಗಿ ಹೊಯ್ಸಳ ಅರಸರೂ ಈ ಬಿರುದುಗಳನ್ನು ಧರಿಸಿರುವುದನ್ನು ಕಾಣಬಹುದು.[29] ಶಾಸನಗಳನ್ನು ಗಮನಿಸಿದಾಗ ಶನಿವಾರ ಸಿದ್ಧಿ ಎಂಬ ಬಿರುದು ಕಾಲಾನುಕ್ರಮದಲ್ಲಿ ಕಲ್ಯಾಣ ಚಾಲುಕ್ಯರು, ಕಲಚೂರಿಗಳು ಹಾಗೂ ಹೊಯ್ಸಳರಲ್ಲಿ ವಂಶಪಾರಂಪರ್ಯವಾಗಿ ಮುಂದುವರಿದುದನ್ನು ಗುರುತಿಸಬಹುದಾಗಿದೆ.

ಶನಿವಾರ ನಮ್ಮ ಸಂಪ್ರದಾಯದಲ್ಲಿ ಅಶುಭ ದಿವಸ. ಆ ದಿನ ಯಾವ ಶುಭ ಕೆಲಸವನ್ನು ಮಾಡಬಾರದು. ಮಾಡಿದರೂ ಅದು ಶ್ರೇಯಸ್ಕರವಲ್ಲ ಎಂಬ ನಂಬಿಕೆ ಇದೆ. ಅಂತಹ ಅಶುಭ ದಿನದಲ್ಲಿಯೂ, ಗಿರಿದುರ್ಗದ ಮೇಲೆ ವಿಜಯಗಳಿಸಿದುದಕ್ಕಾಗಿ ಶನಿವಾರ ಸಿದ್ಧಿ, ಗಿರಿದುರ್ಗಮಲ್ಲ ಬಿರುದುಗಳು ಪ್ರಾಪ್ತವಾಗಿರಬಹುದು. ಶನಿವಾರ ಸಿದ್ಧಿ ಎಂಬುದು ಒಂದು ಗ್ರಾಮವಾಗಿದ್ದಿರಲೂ ಮತ್ತು ಶನಿವಾರ ಶುಭದಿನವೂ ಆಗಿರಬಹುದು.

ಹೊಯ್ಸಳರ ದೊರೆಗಳಾದ ವಿಷ್ಣುವರ್ಧನ ಕ್ರಿ.ಶ. 1131 ರಲ್ಲಿ, ಕ್ರಿ.ಶ. 1177 ರಲ್ಲಿ 3ನೇ ಬಲ್ಲಾಳನೂ ಉಚ್ಚಂಗಿ ಯನ್ನು ಗೆದ್ದ ಘಟನೆಯ ಮಹತ್ವವು ಹಲವು ಶಾಸನಗಳಲ್ಲಿ ಉಲ್ಲೇಖವಾಗಿದೆ. ಅಲ್ಲದೆ ಅಸಗೋಡು ಪಲ್ಲವರ ಕಾಲದಲ್ಲಿ ಉಚ್ಚಂಗಿ ಮುವತ್ತರಲ್ಲಿ ಹೊಯ್ಸಳ ದೊರೆ ವೀರಸಿಂಹನು ಕಲದೇವರಿಗೆ ಭೂಮಿಯನ್ನು ದಾನ ಕೊಟ್ಟ ವಿಷಯ ಶಾಸನವೊಂದರಲ್ಲಿದೆ.[30] ಉಚ್ಚಂಗಿದುರ್ಗದ ವೀರಭದ್ರ ದೇವಾಲಯ ಗರ್ಭಗೃಹದಲ್ಲಿರುವ ಮೂರ್ತಿಯ ಹಿಂದೆ ಶಾಸನವಿದೆ. ಇದು ಹೊಯ್ಸಳರ ಶಾಸನವಾಗಿದ್ದು, ನಂತರದ ದಿನಗಳಲ್ಲಿ ಇದರ ಮೇಲ್ಭಾಗದಲ್ಲಿ ವಿಗ್ರಹ ಕೆತ್ತಿರುವುದರಿಂದ ಶಾಸನದ ಸಾಲುಗಳು ಕತ್ತರಿಸಿಹೋಗಿವೆ.

ಇಲ್ಲಿಂದ ಪೂರ್ವದ ಕಡೆ ಸುಮಾರು 60 ಅಡಿ ಮುಂದೆ ಕೋಟೆ ಆಂಜನೇಯನ ದೇವಸ್ಥಾನ ಆವರಣದ ಬಲ ಬದಿಯಲ್ಲಿ ಬಸವಣ್ಣನ ದೇವಸ್ಥಾನವಿದೆ. ಅದರ ಬಾಗಿಲ ಚೌಕಟ್ಟುಗಳು ಹೊಯ್ಸಳ ಕಾಲದ ಕೆತ್ತನೆಯನ್ನು ಹೊಂದಿದಂತೆ ಕಂಡುಬರುವುದಲ್ಲದೆ, ದ್ವಾರ ಬಂಧದಲ್ಲಿ ಗಜಲಕ್ಷ್ಮಿಯನ್ನು ಕೆತ್ತಿದ್ದು, ಕೆಳಭಾಗದ ಪಾರ್ಶ್ವದಲ್ಲಿ ಮೂರು ಸುಂದರ ಮೂರ್ತಿಗಳನ್ನು ಕೆತ್ತಲಾಗಿದೆ. ಇಲ್ಲಿಂದ [illegible] ಸುಮಾರು 300 ಮೀಟರ್ ನೈರುತ್ಯಕ್ಕೆ ನೊಣಬೇಶ್ವರ ದೇವಾಲಯವಿದ್ದು ಇದು ಹೊಯ್ಸಳರ ಕೊಡುಗೆಯಾಗಿದೆ. ಇದರ ಮುಂದಿನ ಶಾಸನದಲ್ಲಿ ಕ್ರಿ.ಶ. 1207ರ ಉಲ್ಲೇಖ ಇರುವುದರಿಂದ ಹೊಯ್ಸಳ ಕಾಲದ್ದೆಂಬುದು ಸ್ಪಷ್ಟವಾಗುತ್ತದೆ. ಅಲ್ಲದೆ ಈ ಪ್ರದೇಶದಲ್ಲಿ ಹೊಯ್ಸಳರ ಅವಶೇಷಗಳು ಅಲ್ಲಲ್ಲಿ ಕಂಡುಬರುತ್ತವೆ. ಉಚ್ಚಂಗಿ ದುರ್ಗವನ್ನು ಪಾಂಡ್ಯರಿಂದ ಗೆದ್ದ ಹೊಯ್ಸಳರು, ವಿಜಯನಗರದ ಸ್ಥಾಪನೆಯವರೆಗೆ ತನ್ನ ಅಧೀನದಲ್ಲಿಟ್ಟುಕೊಂಡಿದ್ದರು. ಹೀಗೆ ಹೊಯ್ಸಳರ ಉಚ್ಚಂಗಿಯು ಪ್ರತಿಷ್ಠಿತ ಪ್ರದೇಶವಾಗಿದ್ದಲ್ಲದೆ, ಪಾಂಡ್ಯರ ನೊಳಂಬವಾಡಿ ಮುವತ್ತೆರಡು ಸಾವಿರಕ್ಕೆ ಉಚ್ಚಂಗಿದುರ್ಗವು ಕೇಂದ್ರ ಮತ್ತು ರಾಜಧಾನಿಯಾಗಿದ್ದಿತು.

ಉಚ್ಚಂಗಿದುರ್ಗ ಮತ್ತು ವಿಜಯನಗರದ ಅರಸರು :

ದಕ್ಷಿಣಭಾರತದಲ್ಲಿ ಆಳ್ವಿಕೆಯನ್ನು ಮಾಡಿದ ಪ್ರಮುಖ ರಾಜಮನೆತನಗಳಲ್ಲಿ ಒಂದಾದ ವಿಜಯನಗರವು ಕ್ರಿ.ಶ. 1336ರಿಂದ 1565ರ ವರೆಗೆ ಉನ್ನತ ಸ್ಥಿತಿಯಲ್ಲಿದ್ದು, ತನ್ನ ವ್ಯಾಪಕತೆಯನ್ನು ದಕ್ಷಿಣ ಭಾರತದಲ್ಲಿ ಬಹುತೇಕ ಭಾಗದಲ್ಲಿ ಹೊಂದಿತ್ತೆನ್ನಲಾಗುವ ವಿಷಯ ಹೊಸದೇನಲ್ಲ. ಹರಿಹರ, ಪ್ರೌಢದೇವರಾಯ, ಕೃಷ್ಣದೇವರಾಯ, ಅಚ್ಯುತರಾಯ ಪ್ರಮುಖ ಅರಸರಾದರೂ ಆಳಿಯ ರಾಮರಾಯನ ಹೆಸರೂ ಕೇಳಿ ಬರುತ್ತದೆ. ಶಾಸನವೊಂದರಲ್ಲಿ ಹೀಗಿದೆ :

> ಶ್ರೀ ಶಾಲಿವಾಹನ ಶಕವರುಷಗಳು 1452ನೇ ಕರೋಧನ ಸಂವ
> ತ್ಸರದ ವ್ಯಯಶಾಕ ಶುದ್ಧ 3 ಲು ಶ್ರೀ
> ಮತು ರಾಮರಾಜ ಅಯ್ಯನವರು [31]

ಮತ್ತು ಉಚ್ಚಂಗಿ ದೇವತೆಯ ಉಲ್ಲೇಖದೊಂದಿಗೆ, ದಾನ ಬಿಟ್ಟ ವಿಷಯ ತಿಳಿದುಬರುತ್ತದೆ. ಇದಕ್ಕಿಂತ ಪೂರ್ವದಲ್ಲಿ ಕೃಷ್ಣದೇವರಾಯನ ಪಟ್ಟಾಭಿಷೇಕ ಕಾಲದಲ್ಲಿ ಸಭೆಯಲ್ಲಿದ್ದು ಅವರ ವಂಶಸ್ಥರು ಹರಪನಹಳ್ಳಿಯ ಪಾಳೇಗಾರರ ಪ್ರಾಂತವನ್ನು ಪಾಲಿಸುವುದಕ್ಕೆ ಅನುಕೂಲವಾದ ಸಿಬ್ಬಂದಿಯಲ್ಲಿದ್ದಿರಬಹುದಾದುದು ತಿಳಿದುಬರುತ್ತದೆ.[32]

ದಾದಯ್ಯ ನಾಯಕನಿಗೆ ವಿಜಯನಗರದ ಅರಸರಿಂದ ಅನೇಕ ಬಿರುದುಗಳು ಪ್ರದಾನ ಮಾಡಲ್ಪಟ್ಟಿರುವುದು ತಿಳಿದುಬರುತ್ತದೆ.[33] ಈ ಮೇಲಿನ ಹೇಳಿಕೆಗಳ ಆಧಾರದ ಮೇಲೆ ತಿಳಿದುಬರುವ ಅಂಶಗಳನ್ನೊಳಗೊಂಡಂತೆ, ಉಚ್ಚಂಗಿದುರ್ಗ ಮತ್ತು ಹೊಯ್ಸಳರ ಅಭ್ಯುದಯದಲ್ಲಿ ಪ್ರಸಾಧಿಸಿದಂತೆ, ಉಚ್ಚಂಗಿ ದುರ್ಗವನ್ನು ಹೊಯ್ಸಳರು ಗೆದ್ದುದರಿಂದ ತುಂಗಭದ್ರ ನದಿಯ ಉತ್ತರ ಭಾಗದವರೆಗೆ ಇವರ ನಾಲ್ಕನೇ ಬಲ್ಲಾಳ ನಿ:ಸಂತಾನವಿದ್ದಿರಬೇಕು. ಆಗ ಹಿಂದೂ ರಾಜ್ಯ ಹಾಳಾಗುವ ಸ್ಥಿತಿಗೆ ಬಂದಿದ್ದು, ದಕ್ಷಿಣದಲ್ಲಿ ಪಾಂಡ್ಯನಾಡು ಮುಸಲ್ಮಾನರ ಆಳ್ವಿಕೆಗೆ ತುತ್ತಾಗಿದ್ದಿತು. ಆ ಸಂದರ್ಭದಲ್ಲಿ ರಾಜ್ಯದ ರಕ್ಷಣೆಗೆ ಹರಿಹರ ಬುಕ್ಕರು ಹೊಯ್ಸಳ ಬಲ್ಲಾಳನ ಮಾಂಡಲಿಕರು, ಬಳಗದವರೂ ಸೇರಿದಂತೆ ರಾಜ್ಯ ಕಟ್ಟಲು ಮುಂದಾದರು. ಇದರಿಂದ ವಿಜಯನಗರ ಸ್ಥಾಪಿಸಲ್ಪಟ್ಟಿತು.[34] ಆಗ ಹೊಯ್ಸಳರ ಪ್ರದೇಶವಾದ ಉಚ್ಚಂಗಿದುರ್ಗವು ವಿಜಯನಗರದ ಆಡಳಿತಕ್ಕೆ ಒಳಪಟ್ಟಿತು. ವಿಜಯನಗರ ರಾಜ್ಯವು ಕ್ಷೀಣಿಸಿದಾಗ, ಪಾಳೇಗಾರರ ಸ್ವತಂತ್ರರಲ್ಲಿ ದಾದಯ್ಯ ನಾಯಕನು ಒಬ್ಬನು.[35] ಇವನು ಉಚ್ಚಂಗಿದುರ್ಗದಲ್ಲಿ ಆಳ್ವಿಕೆ ಮಾಡಿದುದು ತಿಳಿದುಬರುತ್ತದೆ.

ವಿಜಯನಗರದ ಅರಸರು ದೇವಾಲಯಗಳಿಗೆ ದಾನ ದತ್ತಿ ನೀಡಿದ ಉಲ್ಲೇಖಗಳು, ಮತ್ತು ಕೆರೆಕಟ್ಟಿಸಿದ ಪ್ರಸ್ತಾಪಗಳು ಉಚ್ಚಂಗಿದುರ್ಗದ ಸುತ್ತ ಮುತ್ತಲಿನ ಶಾಸನಾವಶೇಷ ಗಳಿಂದ ತಿಳಿದುಬರುತ್ತದೆ.

## ಉಚ್ಚಂಗಿ ದುರ್ಗದ ಪಾಳೇಗಾರರು :

ಉನ್ನತ ಸ್ಥಿತಿಯಲ್ಲಿದ್ದ ವಿಜಯನಗರ ಸಾಮ್ರಾಜ್ಯವು ರಕ್ಕಸತಂಗಡಿ ಕಾಳಗವಾದ ನಂತರ ಶಿಥಿಲವಾಗುತ್ತಾ ಬಂದಿತು. ಆಗ ಕರ್ನಾಟಕದಲ್ಲಿ ಪಾಳೇಗಾರರ ವಂಶದವರು ಪಟ್ಟಣಗಳನ್ನು ಆರಿಸಿಕೊಂಡು ಚಿಕ್ಕಪುಟ್ಟ ರಾಜ್ಯಗಳನ್ನು ಕಟ್ಟಿಕೊಂಡರು. ಅಂತಹ ಪಾಳೇಗಾರರ ಪಟ್ಟಣಗಳಲ್ಲಿ ಉಚ್ಚಂಗಿದುರ್ಗವು ಒಂದೆಂದು ಕಂಡುಬರುವುದು. ಇಲ್ಲಿ ದಾದಯ್ಯ ನಾಯಕ ಪಾಳೇಗಾರನಾಗಿದ್ದು ಉಚ್ಚಂಗಿ ದುರ್ಗವನ್ನು ಕೇಂದ್ರ ಮಾಡಿಕೊಂಡು ಮೊದಲ ಪಾಳೇಗಾರನಾಗಿ ಮತ್ತು ಆತ ಆಳಿದ ವಿವರಗಳು ಹಾಗೂ ಸಂಬಂಧಿಕರನ್ನು ತಿಳಿಸಲು ಕೆಲವು ಹೇಳಿಕೆಗಳು ಹೀಗಿವೆ:

ಒಂದನೆಯದಾಗಿ ವಿಜಯನಗರದ ಸ್ಥಾಪನೆಗೆ ಇರುವ ಮೊಲ ಮತ್ತು ನಾಯಿ ಹೇಳಿಕೆಯಂತೆಯೇ ಇಲ್ಲಿಯೂ ಬರುತ್ತದೆ. ದಾದಯ್ಯನಾಯಕನು, ಮೊಲವು ನಾಯಿಯನ್ನು ಅಂಜಿಸಿದ ದೃಶ್ಯವನ್ನು ಕಂಡು ಆ ಸ್ಥಳದಲ್ಲಿ ರಾಜ್ಯಕಟ್ಟಿದನೆಂದು ಅದೇ ಹರಪು ರವಾಗಿದ್ದಿತೆಂಬ ಹೇಳಿಕೆಇದೆ.

ಎರಡನೆಯದಾಗಿ, ಬೇಡರ ಮುದ್ದಪ್ಪ ನಾಯಕನಿಗೆ ದಾದಯ್ಯ, ರಂಗಯ್ಯ, ತಿಮ್ಮಯ್ಯ ಮತ್ತು ಓಬಣ್ಣ ಎಂಬ ನಾಲ್ಕು ಮಕ್ಕಳಿದ್ದರು. ಅದರಲ್ಲಿ ದಾದಯ್ಯನಿಗೆ ಸ್ವಪ್ನವಾಯಿತಂತೆ. ಅದರಂತೆ ತುಂಗಾಭದ್ರ ನದಿಯನ್ನು ಮೊದಲಗಟ್ಟಿಯ ಬಳಿ ದಾಟಿ ಕಾನಹಳ್ಳಿಯಲ್ಲಿ ನೆಲಸಿದ್ದರೆಂದು, ನಂತರದಲ್ಲಿ ಬಾಗಳಿ ಗೌಡರ ಪರಿಚಯದೊಂದಿಗೆ ಒಂದು ಕತ್ತಿಯ ವಿಷಯವು ತಿಳಿಯಿತಂತೆ. ಆ ಕತ್ತಿಯು ಹೊಯ್ಸಳ ವಿಷ್ಣು ವರ್ಧನನದೆಂದು ಅದನ್ನು ವಿಷ್ಣುವರ್ಧನನೇ ಒಂದು ಗುಂಡಿಯಲ್ಲಿ ಹೂಳಿಟ್ಟನೆಂದು ನಂತರ ವಿಷ್ಣುವರ್ಧನ ಸಮೀಪದ ಬೆಟ್ಟದಲ್ಲಿ ಅಡಗಿ ಕೊಂಡಿದ್ದನಂತೆ.(ಇಂದಿಗೂ ಕತ್ತಿಗುಡಿ ಬೆಟ್ಟವೆಂದು ಕರೆಯುವರು) ಕತ್ತಿಯನ್ನು ಗೌಡರ ಮನೆಯಿಂದ ಪಡೆದು ದಾದಯ್ಯನು ನೀಲುಗುಂದದ ಅಡವಿಯಲ್ಲಿ ಬೇಟೆಯಾಡಿದ ನಂತರ ವಿಶ್ರಾಂತಿ ಪಡೆಯುವಾಗ ಇವನ ಮೇಲೆ ಹುತ್ತದಲ್ಲಿ ಸರ್ಪ ಇದ್ದು

ವಿಷಯವನ್ನು ಕಾಮಭಟ್ಟರಿಂದ ತಿಳಿದು ಅವರ ಹೇಳಿಕೆಯಂತೆ ಒಂದು ರಾಜ್ಯ ಕಟ್ಟಿದನಂತೆ ಅದೇ ಹರಪುರವಾಯಿತೆಂಬ ಪ್ರತೀತಿ ಇದೆ.

ಮೂರನೆಯದಾಗಿ ದಾದಯ್ಯನಿಗೆ ಸ್ವಪ್ನದಲ್ಲೊಂದು ದಿನ ದೇವಿಯು ಆದೇಶವಾಯಿತಂತೆ. ಅದರಂತೆ ವಿಜಯನಗರದ ಅಚ್ಯುತದೇವರಾಯನ ವಾಗ್ಗೇಯಕಾರ ರಾಮಪ್ಪನ ಮನೆಯಲ್ಲಿ ದರೋಡೆ ಮಾಡಿಕೊಂಡು ಬಂದ ದರೋಡೆಕಾರರ ಐಶ್ವರ್ಯವು ದಾದಯ್ಯನಿಗೆ ಸಿಗಲಾಗಿ ಇದರಿಂದ ರಾಜ್ಯವನ್ನು ನಿರ್ಮಿಸಿದನೆಂದು ತಿಳಿದು ಬರುತ್ತದೆ. ನಾಲ್ಕನೆಯದಾಗಿ ಕೆಳದಿ ನೃಪ ವಿಜಯ (ಪು–182) ಉಲ್ಲೇಖಿಸಿದಂತೆ '' ಆದಿಯೊಳ್ ಉಚ್ಚಂಗಿಯೆಂಬ ಸ್ಥಳದೊಳಿರ್ದು ಅನಂತರಂ ಹರಿಪುರ ಪ್ರತಿನಾಮ ಹರಪನಹಳ್ಳಿ ಎಂಬ ಕೋಟೆಯಂ ಬಲಿಸಿ ಆ ಕೋಟೆಯೊಳಿರ್ದು ರಾಜ್ಯಂ ಗೆದ್ದ ದಾದಾನಾಯಕ, ರಂಗರಾಜಯ್ಯ, ಹಿರಿಯ ಬಸವಂತ ನಾಯಕ '' ಇತ್ಯಾದಿ ವಿಷಯಗಳು ತಿಳಿದು ಬರುವವು.

ಈ ಹೇಳಿಕೆಗಳು ದಾದಯ್ಯ ನಾಯಕನೇ ಉಚ್ಚಂಗಿ ದುರ್ಗ ಮತ್ತು ಹರಪನಹಳ್ಳಿಯ ಪಾಳೇಗಾರರ ರಾಜ್ಯಸ್ಥಾಪಕನೆಂದು ಸಮರ್ಥಿಸುತ್ತದೆ. ಈ ದಾದಯ್ಯ ನಾಯಕನಿಗೆ ಕ್ರಿ. ಶ: 1566 ರಲ್ಲಿ ಪಟ್ಟಾಭಿಷೇಕವಾದಂತೆ ಕ್ರಿ. ಶ: 1800 ರಲ್ಲಿ ಹರಪನಹಳ್ಳಿಯು ಬ್ರಿಟಿಷರ ವಶವಾಗುವ ಕಾಲದಲ್ಲಿ ಅವರಿಗೆ ಬರೆದುಕೊಟ್ಟ ಕೈಫಿಯತ್ತಿನಲ್ಲಿ ಸ್ಪಷ್ಟವಾಗಿ ಉಲ್ಲೇಖಿಸಿದ್ದು ತಿಳಿದುಬರುತ್ತದೆ.[36] ದಾದಯ್ಯ ನಾಯಕನು ಮೊದಲು ಬಾಗಳಿಯಲ್ಲಿದ್ದನು.[37] ನಂತರದಲ್ಲಿ ದಾದಯ್ಯನಾಯಕನು ಚಿತ್ರದುರ್ಗದ ತಿಮ್ಮಣ್ಣ ನಾಯಕನಿಗೆ ಬಸವಾ ಪಟ್ಟಣದ ಕೆಂಗಣ್ಣನ ವಿರುದ್ಧ ಸಹಾಯ ಮಾಡಿದ್ದರಿಂದ ಉಚ್ಚಂಗಿ ದುರ್ಗವನ್ನು ಮತ್ತು ತನ್ನ ಮಗಳಾದ ಹೊನ್ನಮ್ಮ ನಾಗತಿಯನ್ನು ಚಿತ್ರದುರ್ಗದ ತಿಮ್ಮಣ್ಣ ನಾಯಕನು ದಾದಯ್ಯ ನಾಯಕನಿಗೆ ಕೊಟ್ಟನೆಂದು ಊಹಿಸಬಹುದಾಗಿದೆ.[38]

ಕೆಳದಿ ನೃಪ ವಿಜಯದಲ್ಲಿ ಉಲ್ಲೇಖಿಸಿದ , ದಾದಾ ನಾಯಕನು ಮೊದಲ ದೊರೆ. ಇವನು ಬಾಗಳಿಯ ಮಾಚೇನಾಯಕನ ಮಗನು.[39] ಕ್ರಿ.ಶ:1530 ರಲ್ಲಿ ದಾದಯ್ಯ ನಾಯಕನು ಪಾಳೇಗಾರನಾಗಿದ್ದ ಎಂಬುದನ್ನು ಶಾಸನಾಧಾರಗಳಿಂದ ತಿಳಿಯಬಹುದು. ದಾದಯ್ಯನಾಯಕನಿಗೆ ವಿಜಯ ನಗರ ಅರಸರಿಂದ ಬಂದ ಅಥವಾ ಮಾನ್ಯ ಮಾಡಿದಂಥ ಬಿರುದುಗಳು ಮನ್ನೆಹಾನಾಚಾರ್ಯ ಭಾಷೆಗೆ ತಪ್ಪುವ ನಾಯಕರ ಗಂಡ, ಮೊರೆ ಹೊಕ್ಕವರ ಕಾಯ್ವಮಾರಂತರ ಗೆಲುವ, ಇತ್ಯಾದಿಗಳಿವೆ.[40] ಕ್ರಿ.ಶ: 1557 ರಿಂದ 1593 ರ ವರೆಗೆ ಆಳಿದನೆಂದು ಹೇಳಿಕೆಗಳೂ ಇವೆ. ಇವನು ವಿಜಯನಗರ ಅರಸರ ಮನ್ನಣೆಯನ್ನು ಪಡೆದು ಹರಪನಹಳ್ಳಿಯ ಪ್ರಾಂತ್ಯವನ್ನು ಪಾಲಿಸುವುದಕ್ಕೆ ಅನುಕೂಲವಾದ ಸಿಬ್ಬಂದಿಯನ್ನು ಪಡೆದನೆಂದು ಹೇಳುತ್ತಾರೆ. ಈ ಮನೆತನದವರು ಈಗಲೂ ಹರಪನಹಳ್ಳಿಯಲ್ಲಿಯೇ ಇರುವರು. ಇವರು ವಿಜಯನಗರದ ಕೃಷ್ಣದೇವರಾಯರ ಪಟ್ಟಾಭಿಷೇಕ ಕಾಲದಲ್ಲಿ ಸಭೆಯಲ್ಲಿದ್ದಂತೆ ರಾಯವಾಚಕವು ಪುಸ್ತಕದಲ್ಲಿದೆ.[41] ದಾದಯ್ಯನಾಯಕನು ಕವಿಗಳಿಗೆ ಆಶ್ರಯ ನೀಡಿದ್ದನು. ದೇವ ಎಂಬ ಕವಿ ಮರುಳು ಸಿದ್ಧೇಶ್ವರ ಚರಿತ್ರೆಯನ್ನು ಬರೆದ.

ಪಾಳೆಗಾರನು ದೇವಸುತ ಪೇಳೆನುತಲೀ ಕೃತಿಯ
ಶಾಲವಾಹನ ಶಕಂ ಸಾಗುತಿರೆ ಸಾವಿರದ
ಮೇಲೆ ಐನೂರು ದಂಭೈನೆಯ ಸರ್ವಜಿತ ಸಂವತ್ಸದೆಂದಿನಿಸಮಾ
ಕಾಲದೊಳು ವೈಶಾಖಶುದ್ಧ ಪೌರ್ಣಮಿಯೊಳಗಾ
ವೇಳೆಯೊಳು ಮರುಳು ಸಿದ್ಧೇಶ್ವರನು ಕೃತಿಯ ಕೇಳಶರಣರು ಸತತ

ಕ್ರಿ. ಶ: 11-5-1537 ( ಶ್ರೀಯುತ ಅ.ನ. ಕೃಷ್ಣರಾಯ ಮರುಳು ಸಿದ್ಧ ಕಾವ್ಯವೆಂಬ ಗ್ರಂಥ ಪ್ರಸ್ತಾವನೆಯಲ್ಲಿ ನೋಡಬೇಕು)

ಹರಪನಹಳ್ಳಿಯ ಶ್ರೀತಿಮಲಪುರದಯ್ಯ ಎಂಬ ಲಕ್ಷ್ಮಿ ವೆಂಕಟರಮಣ ಸ್ವಾಮಿಯು ತಾನಾಗಿಯೇ ಪ್ರಸನ್ನನಾಗಿ ಮೈದೂರಿನಿಂದ ಬರಲ್ಪಟ್ಟು ಮತ್ತು, ಹರಪನಹಳ್ಳಿ ನಾಯಕರಿಗೆ ಒಲುಮೆಯ ದೇವರಾದ ಸಂಗತಿಯು ತಿಳಿದು ಬರುತ್ತದೆ. ದಾದಯ್ಯ ಮತ್ತು ರಂಗಯ್ಯರು ದೇವರನ್ನು ಹರಪನಹಳ್ಳಿಯಿಂದ ಆಗ್ನೇಯ ದಿಕ್ಕಿಗೆ 2 ಕಿ.ಮೀ. ದೂರದಲ್ಲಿರುವ ದೇವರತಿಮಲಾಪುರದಲ್ಲಿ ಪ್ರತಿಷ್ಠಾಪಿಸಿ ಗುಡಿ ಗೋಪುರಗಳನ್ನು ನಿರ್ಮಿಸಿ ದೇವರ ಅಭಿಮುಖದಲ್ಲಿ ತಮ್ಮ ಸಪತ್ನೀಕ ಪ್ರತಿಮೆಗಳನ್ನು ಸ್ಥಾಪಿಸಿ ಸಣ್ಣ ಗುಡಿಗಳನ್ನು ಕಟ್ಟಿಸಿಕೊಂಡಿದ್ದಾರೆ. ಇಂದಿಗೂ ಈ ಮೂರ್ತಿಗಳು ಆ ಹೆಸರಿನಿಂದಲೇ ಕರೆಯಲ್ಪಡುತ್ತವೆ.

ರಂಗಣ್ಣ ನಾಯಕ:

ದಾದಯ್ಯನ ನಂತರ ರಂಗರಾಜನು ಅಥವಾ ರಂಗಣ್ಣನಾಯಕನು ಹರಪನಹಳ್ಳಿ ಪಾಳೇಗಾರನಾಗಿದ್ದನು.[42]

" ಶ್ರೀ ಮಹಾರಾಜಾಧಿರಾಜ ರಾಜ ಪರಮೇಶ್ವರ
ಶ್ರೀ ವೀರಪ್ರತಾಪ ಶ್ರೀ ವೀರ ವೆಂಕಟತಿರುಮಲ
ರಾಯದೇವ ರಾಯರಯ್ಯರವರ
ದಿವ್ಯಶ್ರೀ ಪಾದಪದ್ಮಗಳಿಗೆ"

" ದೇವರ 'ವರಕುಮಾರ ಕನಕಗಿರಿ ಲಕ್ಷಾನಾಗರಿ ರಾಡಾರಾಮ ಜಯಸಿಂಗ ಮುಮ್ಮಡಿ ಕನಕಪ್ಪ ವೃಡಿಸಿನಾಭಕರ ಕುಮಾರ ರಂಗಪ್ಪ ನಾಯಕನು ಎರಡು ಪಾದದ ಮೇಲೆ ಬಿದ್ದು ಮಾಡುವ ಸಾಷ್ಟಾಂಗ ಬಿನ್ನಹ ನಾಮದೇವರ ವರ ಅನುಗ್ರಹದಿಂದ ಕ್ಷೇಮದಲ್ಲಿದ್ದೇನೆ. ತಮ್ಮ ಸಾಮ್ರಾಜ್ಯದಿ ವೈಭವಿಗಳ ನಿರೂಪಿಸುವಲ್ಲ" ಹೀಗೆ ಕುಮಾರ ರಂಗಪ್ಪ ನಾಯಕನ ಪತ್ರ ಕಂಡು ಬರುವದು ಮತ್ತು ಕೆಳಗಡೆ ಕನಕ ನಾಯಕ ಎಂದು ಬರೆದ ಮೊಹರು ಇದೆ. ಅಂದರೆ ಕುಮಾರ ರಂಗಪ್ಪ ನಾಯಕನು ಹರಪನಹಳ್ಳಿಯನ್ನು ಪಾಲಿಸುತ್ತಿದ್ದನು. ಇವನು ಕ್ರಿ.ಶ: 1593 ರಿಂದ 1616 ರ ವರೆಗೆ ಆಳಿದನೆಂದು ಹೇಳಿಕೆಗಳಿವೆ. ಉಚ್ಚಂಗಿ ದುರ್ಗವು ಇವನ ಆಳ್ವಿಕೆಗೆ ಒಳಪಟ್ಟಿತ್ತು.

ಉಚ್ಚಂಗಿ ದುರ್ಗದ ಉತ್ಸವಾಂಬ ದೇವಿಯ ಗುಡಿಯಲ್ಲಿಯ ಬಲಭಾಗದ ಗಂಟೆ ಶಾಸನದಲ್ಲಿ ಕುಮಾರ ರಂಗರಾಜನ ಉಲ್ಲೇಖವು ಕಂಡು ಬರುವದು. ಇವರ ಆಳ್ವಿಕೆಯಲ್ಲಿ ಉಚ್ಚಂಗಿ ದುರ್ಗ ಪ್ರಮುಖ ಕೇಂದ್ರ ಆಗಿದ್ದಿರಬಹುದು.

ಭರಮಣ್ಣನಾಯಕ :

ಇವರ ಕಾಲದಲ್ಲಿ ಉಚ್ಚಂಗಿದುರ್ಗ ಇವನ ಆಳ್ವಿಕೆಗೆ ಒಳಪಟ್ಟಿರಬಹುದು, ರಂಗಣ್ಣನ ನಂತರ ಇವನೇ ಪಾಳೇಗಾರರನೆಂಬ ಹೇಳಿಕೆಗಳು ಇವೆ. ಇವನ ಕಾಲಾವಧಿ 1617ರಿಂದ 1650 ಎಂಬುದು ಸ್ಥಳೀಯ ಲೇಖಕರು ಅಭಿಪ್ರಾಯಪಡುತ್ತಾರೆ. (ಚಿಕ್ಕೇರೂರು ಗೋವಿಂದಚಾರ್ಯರ) ನಂತರ ವೀರ ಮುಮ್ಮಡಿ ನಾಯಕನು 1687ರವರೆಗೆ ಆಳಿದನೆಂದು ಊಹಿಸಬಹುದಾಗಿದೆ.

ಬಸವಂತನಾಯಕ :

ಇವನು ಹರಪನಹಳ್ಳಿಯನ್ನು ಆಳಿದನು ಮತ್ತು ಸಾಕಷ್ಟು ಕೆಲಸಕಾರ್ಯಗಳನ್ನು ಮಾಡಿದನೆಂದು ಕಂಡುಬರುತ್ತದೆ. ಕಾಲಾವಧಿ 1633 ರಿಂದ 1691 ಎಂದು ಅಭಿಪ್ರಾಯ ಪಡುತ್ತಾರೆ. ಚಿಕ್ಕ ಕೆರೆಯಾಗಿನ ಹಳ್ಳಿ ಗ್ರಾಮದ ಪೂರ್ವಭಾಗದಲ್ಲಿ ಶ್ರೀ ಕರಬಸಪ್ಪ ನಾಯಕನ ಶಿಲಾಶಾಸನ [illegible] ಶಾ.ಶ. 1613 (ಕ್ರಿ.ಶ,1691) ನೆಯ ವಿರೋಧಿನಾಮ ಸಂವತ್ಸರದ ವೈಶಾಖ 14 ರಲ್ಲಿ ಬಾಗಳಿ ಸಂಸ್ಥಾನವು ಪರಾಧೀನವಾಗಬಾರದಂತೆಯೂ ಸಂಸ್ಥಾನವೆಂಬ ಉಲ್ಲೇಖ ಇತ್ಯಾದಿ ಬರುತ್ತದೆ.

ಉಚ್ಚಂಗಿ ದುರ್ಗ ಹಳ್ಳಿಗಳನ್ನೊಳಗೊಂಡ ದಕ್ಷಿಣ ಪ್ರಾಂತವು ಮತ್ತು ತುಂಗಭದ್ರಾ ನದಿಯ ಪರ್ಯಂತರವೂ ಹರಪನಹಳ್ಳಿ ಸಂಸ್ಥಾನವೆಂದು ವ್ಯವಹರಿಸಲ್ಪಡುತ್ತಿರುವುದು.

ಹರಿಯಮ್ಮಾಜಿ :

ಬಾಗಳಿ ಹರಿಯಮ್ಮಾಜಿಯವರು ಅರಮನೆ ಪುರೋಹಿತರಾದ ಶ್ರೀ ನಾಗದೇವ ಭಟ್ಟರಿಗೆ ಅಲಗಿಲವಾಡದಲ್ಲಿ 1 ಮಕ್ಕಳದ ಗದ್ದೆಯನ್ನು ದಾನ ಮಾಡಿದ ಉಲ್ಲೇಖ ಶಾಸನದಲ್ಲಿ ಬಂದಿವೆ ಇದಕ್ಕುಕೂಡ ಬಾಗಳಿಯಿಂದ ಆಳಿದ ಉಲ್ಲೇಖ ವ್ಯಕ್ತವಾಗುತ್ತದೆ.

ಮುಮ್ಮಡಿ ಬಸಪ್ಪ ನಾಯಕ :

ಇವನು ಹರಪನಹಳ್ಳಿ ಬಾಗಳಿಯ ಒಡೆಯನಾಗಿದ್ದನು. ಉಚ್ಚಂಗಿ ದುರ್ಗವು ಸೇರಿತ್ತು. ಕಾಲ ಕ್ರಿ.ಶ. 1749 ಈತ ಉಚ್ಚಂಗೆಮ್ಮಗೆ ಗಂಟೆಯನ್ನು ಮಾಡಿಸಿ ಕೊಟ್ಟಿದ್ದಾನೆ.[43] ಅಂದರೆ ಪ್ರಮುಖ ಕೇಂದ್ರವಾದ ಉಚ್ಚಂಗಿದುರ್ಗದ ಉಚ್ಚಂಗೆಮ್ಮ ಇವರ ಕುಲದೇವರಾದ್ದಿರಬಹುದು.

ಸೋಮಶೇಖರ ನಾಯಕ :

ರಂಗರಾಯದೇವ ಮಹಾರಾಯರಿಗೆ ಸೋಮಶೇಖರನಾಯಕನು ಬಲಗೈಯಾ ಇದ್ದನು ಹರಪನಹಳ್ಳಿ ನಾಯಕರ ಇತಿಹಾಸದಲ್ಲಿ ಈತನ ಪರಿಪಾಲನೆಯು ಕೋಗಿಲೆಗೆ ವಸಂತಕಾಲದಷ್ಟು ಸುಖಮಯವಾಗಿತ್ತೆಂದು ತಿಳಿದುಬರುತ್ತದೆ.[44]

ಶ್ರೀ ಮನ್ಮಹಾನಾಯಕಾಚಾರ್ಯ ಭಾಷೆಗೆ ತಪ್ಪುವ ನಾಯಕ ಗಂಡ ಮೊರೆಹೊಕ್ಕರೆ ಕಾಯ್ವ ಮಾರಂತರ ಗೆಲ್ವ ಬಾಗುಳಿ ಬಸಪ್ಪ ನಾಯಕರ ಸೋಮಶೇಖರ ನಾಯಕಪ್ಪ ಅಯ್ಯನವರು. ಕೊಟ್ಟೂರು ಕಾಳಗದಲ್ಲಿ ಸಿದ್ದೋಜಿ ಮುರಾರಿ, ಮತ್ತು ಮದಕರಿಯವರ ಸೈನ್ಯವನ್ನು ಸೋಲಿಸಿ ಅವರಿಂದ ಕಪ್ಪ ಪಡೆದನೆಂದು ಕಂಡುಬರುವುದು. ಚಿತ್ರದುರ್ಗದವರ ಕೈ ತಪ್ಪಿ ಹೋಗಿದ್ದ ಉಚ್ಚಂಗಿ ದುರ್ಗವನ್ನು ಕ್ರಿ.ಶ. 1727 ರಲ್ಲಿ ಮತ್ತೆ ಆಕ್ರಮಿಸಿಕೊಳ್ಳಲೆತ್ನಿಸಿದರೂ ಸಾಧ್ಯವಾಗಲಿಲ್ಲ.[45] ಎಂಬ ಅಂಶವನ್ನು ಕಾಣಬಹುದು ಹಿರೇ ಮದಕರಿನಾಯಕನು ಹರಪನಹಳ್ಳಿ ಅರಸನನ್ನು ಸೋಲಿಸಿ ಅವನಿಗೆ ನೆಲೆಯೂರಲು ಅವಕಾಶ ಕೊಡದೆ ಅವನ ರಾಜ್ಯವನ್ನು ಆಕ್ರಮಿಸಿಕೊಂಡನು. ಹಿರೇ ಮದಕರಿ ನಾಯಕನು ಸೋಮಶೇಖರ ನಾಯಕನ ಕಾಲದಲ್ಲಿಯೇ ಉಚ್ಚಂಗಿದುರ್ಗ ಉತ್ಸವಾಂಬ ಮೂರ್ತಿಯನ್ನು ತೆಗೆದುಕೊಂಡು ಹೋದುದು ಎಂಬ ಹೇಳಿಕೆಗಳು ಇವೆ. 1748ರಲ್ಲಿ ಹಿರೇ ಮದಕರಿನಾಯಕ ಮತ್ತು ಹರಪನಹಳ್ಳಿ ಸೋಮಶೇಖರನಾಯಕ ಇರ್ವರೂ ಮಾಯಕೊಂಡದ ಬಳಿ ಕಾದಾಡಿದರು. ಅದರಲ್ಲಿ ಮದಕರಿಯು ಮಡಿದನು.[46] ಸೋಮಶೇಖರನು ಬದನೂರು ಸೈನ್ಯ ಸಹಾಯತೆಗೆದುಕೊಂಡು ಉಜ್ಜನಿಕೋಟೆ ತೂಲಹಳ್ಳಿ ಕೋಟೆಗಳನ್ನು ಗೆದ್ದುಕೊಂಡನು. (2000 ಕಾಲಾಳುಗಳು, 4000 ಕುದುರೆಗಳು ಹರಪನಹಳ್ಳಿ ನಾಯಕರವೇಯಾದ್ದು. ದುರ್ಗದ ನಾಯಕರು 12 ಫಿರಂಗಿ, 2000 ಕಾಲ್ಬಲ, 600 ಸವಾರರು) ಘೋರ ಸಂಗ್ರಾಮದ ನಂತರ ಸೋಮಶೇಖರನಿಗೆ ಜಯವಾಯಿತು.



ಸೋಮಶೇಖರ ನಾಯಕನು ಒಬ್ಬ ಧೀರ ದೊರೆಯಾಗಿದ್ದನು. ಎಂಬುದನ್ನು ಈ ವಿಜಯಗಳಿಂದ ಕಾಣಬಹುದು. ಉಚ್ಚಂಗಿದುರ್ಗವನ್ನು ಗೆಲ್ಲಲು ಪುನಃ ಹಿರೇ ಮದಕರಿಯ ಕಾಲದಲ್ಲಿ ಪ್ರಯತ್ನಿಸಿದರೂ ಪಡೆಯಲಾಗಲಿಲ್ಲ. ಎಂಬ ಅಂಶ ಗಮನೀಯವಾದುದು. ಸೋಮಶೇಖರನು ಚಿತ್ರದುರ್ಗ ಬಿಟ್ಟಂತೆ ಮಿಕ್ಕೆಲ್ಲ ಅರಸರೊಂದಿಗೆ ಸ್ನೇಹ ಹೊಂದಿದ್ದಂತೆ ತಿಳಿಯುವುದು. ಜನೋಪಕಾರ್ಯ ಕೆಲಸ ಕಾರ್ಯ ಮಾಡಿದ್ದಾನೆ. ಈ ಕಾಲದ ಚಿತ್ರದುರ್ಗ ಮತ್ತು ಹರಪನಹಳ್ಳಿ ಅರಸರು ವಿಜಯನಗರದ ಅರಸ ಕೃಷ್ಣದೇವರಾಯನೆ ಮೊದಲಾದವರ ನಾಣ್ಯಗಳನ್ನೇ ಚಲಾವಣೆಯಲ್ಲಿಟ್ಟುಕೊಂಡಿದ್ದರು. ಸ್ವಲ್ಪ ವ್ಯತ್ಯಾಸವೇನೆಂದರೆ ನಾಣ್ಯದ ಒಂದು ಕಡೆಗೆ ಶ್ರೀ ಉಚ್ಚಂಗಿಮ್ಮನ ಪ್ರತಿಮೆ ಮತ್ತೊಂದು ಕಡೆಗೆ, [illegible] ಕೃಷ್ಣದೇವರಾಯ.[47] ಸೋಮಶೇಖರ ನಾಯಕನು ಸ್ವಂತ ಟಂಕ ಸಾಲೆ

ನಿರ್ಮಿಸಿದನೆಂದು ಪ್ರತೀತಿಗಳು ಇವೆ. ಉಚ್ಚಂಗಿದುರ್ಗದ ಅಧ್ಯಯನ, ಪ್ರಸ್ತುತ ಪ್ರಬಂಧದ ಉದ್ದೇಶ ಇರುವದರಿಂದ ಈ ವಿಷಯವನ್ನು ಇಲ್ಲಿಗೆ ಮೊಟಕುಗೊಳಿಸಲಾಗಿದೆ.

ಇಲ್ಲಿ ಕ್ರಿ.ಶ. 1566ರಲ್ಲಿ ದಾದಾಯ್ಯ ನಾಯಕನಿಂದ ಮೊದಲುಗೊಂಡ ಹರಪನಹಳ್ಳಿ ಪಾಳೇಗಾರರು ಬಾಗಳಿ ನಂತರ ಉಚ್ಚಂಗಿದುರ್ಗ, ಹರಪನಹಳ್ಳಿ ಪ್ರದೇಶಗಳನ್ನು ಕೇಂದ್ರ ಮಾಡಿಕೊಂಡು ಆಳ್ವಿಕೆಯನ್ನು ಮಾಡಿದರು. ಈ ಪಾಳೆಗಾರರು ಸು. ಕ್ರಿ.ಶ. 1799ರವರೆಗೆ ಅಸ್ತಿತ್ವದಲ್ಲಿದ್ದರು ಎಂಬ ಹೇಳಿಕೆಗಳು ಇವೆ. ಟಿಪ್ಪುವಿನ ನಂತರ ಹರಪನಹಳ್ಳಿ ಇಂಗ್ಲೀಷರ ಕೈ ವಶವಾಗಿರಬಹುದು.

ಕ್ರಿ.ಶ. 1800ರಿಂದ 1947ರ ವರೆಗೆ ಬ್ರಿಟಿಷರ ಆಳ್ವಿಕೆಗೆ ಒಳಪಟ್ಟಿರಬಹುದಾದುದು ಕಂಡುಬರುತ್ತದೆ.

ಅಡಿಟಿಪ್ಪಣಿಗಳು :

1) ಸಾ.ಇ.ಇ. ಸಂ.9 ಸಂಖ್ಯೆ 126
2) ಚಿಕ್ಕರೂರು ಗೋವಿಂದಾಚಾರ್ಯರ ಬಳಿಯ ಹಸ್ತಪ್ರತಿ(ಮ್ಯಾನ್ಯುಸ್ಕ್ರಿಪ್ಟ್ ವಿಲ್ಸನ್)
3) ಭಾಷಾಂತರ ಯೋಜನೆ ಸಮಿತಿ ಕರ್ನಾಟಕ ಪರಂಪರ (ಸಂ.) 1 ಪು. 160 ಬೆಂಗಳೂರು 1990.
4) ——————" —————— ಪು. 134 – 36
5) ಡಾ. ಮೊರೇಸ್, ಡಾ॥ ಸೂರ್ಯನಾಥಕಾಮತ್, ಕರ್ನಾಟಕ ಸಂಕ್ಷಿಪ್ತ ಇತಿಹಾಸ 1973 ಬೆಂಗಳೂರು.
6) ಮೈಸೂರು,ಪುರಾತತ್ವ ವಿಭಾಗದ ವರದಿ 1911 ಪು. 31 – 128 ಪ್ರಬುದ್ಧ ಕರ್ನಾಟಕ
7) ಆರ ಎಸ. ಪಂಚಮುಖಿ ಕರ್ನಾಟಕ ಇತಿಹಾಸ ಪು. 134 19 ಧಾರವಾಡ.
8) ——————" —————— ಕರ್ನಾಟಕ ಭಾರತಿ,ಧಾರವಾಡ
9) ಡಾ. ಪಿ.ಎಸ. ಪಾಟೀಲ (ದಿಕ್ಸೂಚಿ – 1994)
10) ಎಸ ಶ್ರೀಕಾಂತ ಶಾಸ್ತ್ರಿ ಶ್ರದ್ಧಾಂಜಲಿ ಪು. 277
11) ಸಾ.ಇ.ಇ. ಸಂ 6 ಸಂಖ್ಯೆ. 574, 575 ದಲ್ಲಿದೆ.
12) ಡಾ. ಹಂಪನಾಗರಾಜಯ್ಯ ವಿಷ್ಣುವರ್ಧನ, ವಿಜಯಾದಿತ್ಯ,ಕೀರ್ತಿಪರ್ವ ಪು. 47
13) ಭಾಷಾಂತರ ಯೋಜನಾ ಸಮಿತಿ, ಕರ್ನಾಟಕ ಪರಂಪರೆ. ಪು. 164
14 ) ಕರ್ನಾಟಕ ಇತಿಹಾಸ ದರ್ಶನ, ಅಧೀನ ರಾಜಕುಲಗಳು, ಪು. 213
15) ——————" ——————
16) ಚಟ್ನಹಳ್ಳಿಯ ಶಾಸನದಲ್ಲಿ
17) ಸಾ.ಇ.ಇ.ಸಂ. 6 ಸಂಖ್ಯೆ 572
18) ಉಚ್ಚಂಗಿ ಹಾಲಮ್ಮ ಗುಡಿಯ ಮುಂದಿನ ಶಾಸನ
19) ಸಾ.ಇ.ಇ.ಸಂ. 9 ಸಂಖ್ಯೆ. ೨೦೬ ಭಾಗ . ೨
20) ಚಟ್ನಹಳ್ಳಿಯ ಶಾಸನ
21) ಸಾ.ಇ.ಇ.ಸಂ. 6 ಸಂಖ್ಯೆ 572
22) ಡಾ. ಸೂರ್ಯಕಾಮತ್, ಕರ್ನಾಟಕ ಇತಿಹಾಸ ಪು. 441
23) ಟಿ. ವೆಂಕನಗೌಡ, ಕರ್ನಾಟಕ ಇತಿಹಾಸ ಪು. 2 ಮೈಸೂರು.
24) ಸಾ.ಇ.ಇ. ಸಂ. 9 ಭಾಗ – 3 ಸಂಖ್ಯೆ 339
25) ಆರ. ರಾಚಪ್ಪ ಕರ್ನಾಟಕ ಭಾರತಿ ಸಂ. 2 ಸಂಚಿಕೆ 2, ಪುಟ. 122
26 ) ಎ.ಇ. ಸಂ. 3 ಸಂಖ್ಯೆ 37 ಪು. 269– 73
27) ಎಫಿಗ್ರಾಫಿಕ್ಕಾರ 9 ದಾವಣಗೆರೆ ಶಾಸನ ನಂ. 42 ಪು. 122
28) ——————" —————— 84 ಪು. 156.
29) ಆರ. ರಾಚಪ್ಪ, ಕರ್ನಾಟಕ ಭಾರತಿ, ಸಂ. 2. ಸಂಚಿಕೆ. 2 ಪು. 120 ಮೈಸೂರು
30) ಸಾ. ಇ.ಇ. ಸಂ. 9 ಭಾಗ – 1 ಸಂಖ್ಯೆ 339

31) ಉಚ್ಚಂಗಿ ದುರ್ಗದ ಉಚ್ಚಂಗೆಮ್ಮ ದೇವಾಲಯದ ಹೊರ ಭಾಗದ ಶಾಸನ
32) ರಾಯವಾಚಕವು 'ಕೃಷ್ಣದೇವಾರಾಯ' (ಆಂಧ್ರ ಸಾಹಿತ್ಯ ಪರಿಷತ್) ಆನಂದ ಚೈತ್ರ ಸಂ. 3 ಸಂಚಿಕೆ. 1
33) ಸಾ;ಇ.ಇ. ಸಂ. 9 ಸಂಖ್ಯ 685 (ಕೊಟೂರು ಶಾಸನ)
34) ಡಾ. ವಸುಂಧರಾ ಫಿಲಿಯೋಜಾ 'ಅಳಿದುಳಿದ ಹಂಪಿ' ಪು.6
35) ಸಾ.ಇ.ಇ.ಸಂ. 9 ಸಂಖ್ಯೆ. 685(ಕೊಟೂರು ಶಾಸನ)
36) ಚಿಕ್ಕೇರೂರು ಗೋವಿಂದಚಾರ್ಯರ ಹಸ್ತಪ್ರತಿ (ಹರಪನಹಳ್ಳಿ ಪಾಳೇಗಾರರು)
37) ಆ.ನ.ಕೃಷ್ಣರಾಯ ಮರುಳ ಸಿದ್ಧೇಶ್ವರ ಚರಿತ್ರೆ 1587
38) ಕಲೆಷನ್ ವಿಲಸನ್ ಪು. 26 ಸರಕಾರಿ ಲೈಬ್ರರಿ ಮದ್ರಾಸ್ ಚಿಕ್ಕೇರೂರು ಹೊ ಗೋವಿಂದಚಾರ್ಯರ (ಹಸ್ತಪ್ರತಿ)
39) ಸಾ.ಇ.ಇ.ಸಂ. 9 ಸಂಖ್ಯೆ 685
40) ————— " —————
41) 'ಅಂದ್ರ ಸಾಹಿತ್ಯ' ಸಂಪುಟ — 3 ಸಂಚಿಕೆ 1 (ಆನಂದ ಚೈತ್ರ)
42) ಕೆಳದಿ ನೃಪ ವಿಜಯ ಪು. 182
43) ಉಚ್ಚಂಗಿದುರ್ಗದ ಉಚ್ಚೆಂಗೆಮ್ಮ ದೇವಾಲಯದ ಗಂಟೆ ಶಾಸನದಲ್ಲಿ
44) ಕೊಟ್ರೇಶ್ವರನ ಪವಾಡ ಅಮುದ್ರಿತ ವಾರ್ಧಿಕ
45) ಪ್ರೊ. ಲಕ್ಷ್ಮಣ್ ತೆಲಗಾವಿ. ಚಿತ್ರದುರ್ಗದ ನಾಯಕರ ರಾಜಕೀಯ ಚಿತ್ರ ಪು. 80
46) Bellary Dist. Gezetter ಪು. 251
47) Archeological Anual report South Circle madras for 1909 Page-25

## ಅಧ್ಯಾಯ — ನಾಲ್ಕು

## ಪೌರಾಣಿಕ ಮತ್ತು ಜನಪದೀಯ ಅಂಶಗಳಲ್ಲಿ ಉಚ್ಚಂಗಿದುರ್ಗ

### ಪುರಾಣಗಳಲ್ಲಿ ಉಚ್ಚಂಗೆಮ್ಮ ಮತ್ತು ಉಚ್ಚಂಗಿದುರ್ಗ :

ಒಬ್ಬ ದೇವತೆಯ ಮೂಲ. ಮತ್ತು ಹೆಸರು ಬಂದ ಬಗೆಯನ್ನು ತಿಳಿಯಲಿಚ್ಛಿಸಿದಲ್ಲಿ ಪುರಾಣಗಳನ್ನು ಅವಲೋಕಿಸಲೇ ಬೇಕಾಗುವುದು. ಇತಿಹಾಸಕ್ಕೆ ಕೆಲವು ಸಂದರ್ಭಗಳಲ್ಲಿ ಇವು ಮುಖ್ಯ ಆಕರಗಳಾಗಿವೆ. ಉಚ್ಚಂಗೆಮ್ಮ ದೇವತೆಯ ಬಗೆಗೆ ಇರುವ ಪುರಾಣಗಳನ್ನು ಇಲ್ಲಿ ತಿಳಿಯಲು ಪ್ರಯತ್ನಿಸಿದೆ.

ಶ್ರೀ ಕ್ಷೇತ್ರ ಹರಿಹರಕ್ಕೆ ಪೂರ್ವ ದಿಕ್ಕಿನಲ್ಲಿ ಕಲ್ಯಾಂತವೆಂಬ ಹೆಸರಿನ ಪರ್ವತ ಇದೆ. ಅದು ಮಲಯಾಚಲಕ್ಕೆ ಪುತ್ರನಾಗಬೇಕು. ಈ ಪರ್ವತದಲ್ಲಿ ಆಶ್ಚರ್ಯಕರವಾದ ಅನಂತ ಔಷಧಿಗಳು ದೊರೆಯುತ್ತವೆ. ಈ ಪ್ರಾಂತದಲ್ಲಿ ಅನೇಕ ಗುಡಿಗಳಿವೆ. ಈ ಪ್ರಾಂತದ ಗುಡಿಗಳಲ್ಲಿ ದೇವಕನ್ನೆಯರು ವಾಸವಾಗಿದ್ದಾರೆ. ಅವರು ಆಗಾಗ್ಗೆ ಅತಿಹರ್ಷವಾದೊಡನೆ ದಿವ್ಯಗಾನ ಮಾಡುತ್ತಾರೆ. ಈ ಕ್ಷೇತ್ರದ ಅಧಿದೇವತೆ ಹೆಸರು ಶಲಿನಿ(ಮಾಲಿನಿ) ಎಂದಿದೆ. ಈ ಮಹಾದೇವಿಯು ಸರ್ವಸಿದ್ಧಿ ಪ್ರದಾಯಕಳೆಂದು ಪ್ರಸಿದ್ಧಳು. ಈ ಪರ್ವತದಲ್ಲಿ ಬ್ರಹ್ಮ ನಿರ್ಮಿತವಾದ ಸರೋವರ ಹೊಂದಿದೆ ಅದಕ್ಕೆ ಕೊಂಡವೆಂದು ಹೆಸರು. ಇದು ಸ್ಕಂದ ಪುರಾಣದ ಹರಿಹರ ಮಹಾತ್ಮೆಯಲ್ಲಿ ಬರುವ ವಿವರವಾದರೆ, ಉಚ್ಚಂಗೆಮ್ಮನ ಮಹಾತ್ಮೆಯಲ್ಲಿ ಈ ಕೆಳಗಿನಂತೆ ಬರುವುದು.

ರೇಣುಕಾ ಎಲ್ಲಮ್ಮನ ಜೀವನ ವೃತ್ತಾಂತ ಮತ್ತು ಪರಶುರಾಮ ಪಿತೃ ಆಜ್ಞೆ ಪಾಲನೆಗಾಗಿ ರೇಣುಕಾ ಎಲ್ಲಮ್ಮ ತಲೆಯನ್ನು ನೂರಾರಾಒಂದು ಬಾರಿ ಕಡಿದನೆಂದು ಅವು ಬೇರೆ ಬೇರೆ ದಿಕ್ಕಿಗೆ ಬಿದ್ದವೆಂದು, ಅವುಗಳಲ್ಲಿ ಹುಲಿಗೆಮ್ಮ, ಸೌದತ್ತಿ ಎಲ್ಲಮ್ಮ, ಮಾತಂಗೆಮ್ಮ, ಬಳ್ಳಾರಿ ದುರ್ಗಮ್ಮ, ಹೊಸೂರಮ್ಮ, ಸಿರ್ಸಿ ಮಾರಮ್ಮ, ಉಚ್ಚಂಗಿ ಎಲ್ಲಮ್ಮ, ಮೂರ್ತಿಗಳಾದವು ಉಚ್ಚಂಗಿ ಎಲ್ಲಮ್ಮನ ಮೂಲ ರೇಣುಕಾ ಎಲ್ಲಮ್ಮನಿಂದ ಬಂದುದು ಎಂಬ ಒಟ್ಟಾರೆ ಅಭಿಪ್ರಾಯ ಈ ಕಥೆಯಿಂದ ವ್ಯಕ್ತಪಟ್ಟಿದೆ.

ವೈದಿಕ ದೇವತೆಗಳ ಹುಟ್ಟು ಬೆಳವಣಿಗೆ ತಿಳಿಯಬೇಕಾದರೆ, ಪುರಾಣಗಳ ಮೊರೆ ಹೋಗುತ್ತೇವೆ ಅವು ಅಧಿಕ ಪ್ರಮಾಣದಲ್ಲಿವೆ. ಉದಾಹರಣೆಗೆ, ವಿಷ್ಣು ಪುರಾಣ, ವಾಯು ಪುರಾಣ, ಬ್ರಹ್ಮಪುರಾಣ, ಹೀಗೆ 18 ಪುರಾಣಗಳಿವೆ. ಆದರೆ ಉಚ್ಚಂಗೆಮ್ಮನ ಹೀಗೆ ತಿಳಿಯಲು ಸರಿಯಾದ ಪುರಾಣದ ಆಕರಗಳಿಲ್ಲ. ಈ ಮೇಲಿನ ಹೇಳಿಕೆಗಳನ್ನು ಉಚ್ಚಂಗೆಮ್ಮ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ. ಸ್ಕಂದ ಪುರಾಣದಲ್ಲಿ ಹರಿಹರದ ಪೂರ್ವದಿಕ್ಕಿನಲ್ಲಿ ಕಲ್ಯಾಂತ ಪರ್ವತದ ಹೆಸರಿದೆ. ಅದು ಸಂಡೂರಿನ ಕುಮಾರಸ್ವಾಮಿಯ ಬೆಟ್ಟವೂ ಆಗಿರಬಹುದು. ಏಕೆಂದರೆ ಈ ಪುರಾಣದಲ್ಲಿ ಉಲ್ಲೇಖವಾದಂಶಗಳೆಲ್ಲವೂ ಅಲ್ಲಿಯೂ ಇವೆ. ಉಚ್ಚಂಗಿ ದುರ್ಗದಲ್ಲಿಯೂ ಇವೆ. ಹರಿಹರಕ್ಕೆ ಪೂರ್ವದಿಕ್ಕಿನ ಸಮೀಪದ ಪರ್ವತವೆಂದರೆ ಉಚ್ಚಂಗಿದುರ್ಗವಾಗಿದೆ. ಪುರಾಣದಲ್ಲಿ ಉಲ್ಲೇಖಿಸಿದಂತೆ ಉಚ್ಚಂಗೆಮ್ಮನು ಉಗ್ರ ದೇವತೆ ಎಂದು ಸ್ಥಳೀಯರು ಅಭಿಪ್ರಾಯಪಡುತ್ತಾರೆ. ಸ್ಕಂದ ಪುರಾಣದಲ್ಲಿಯೂ ಈ ವಿಷಯವು ಬರುತ್ತದೆ. ಆದರೂ ಸ್ಕಂದ ಪುರಾಣದ ಹರಿಹರ ಮಹಾತ್ಮೆಯನ್ನೇ ಮೂಲ ಆಕರವಾಗಿ ಇಲ್ಲಿಗೆ ಬಳಸಿಕೊಳ್ಳುವುದು ಸೂಕ್ತ ಆಧಾರವಾಗಲಾರದು.

ಉಚ್ಚಂಗೆಮ್ಮ ಮಹಾತ್ಮೆಯಲ್ಲಿ ಈ ದೇವಿಯ ಮೂಲ ರೇಣುಕೆಲ್ಲಮ್ಮನಲ್ಲಿ ಕಾಣುವುದನ್ನು ತಿಳಿಸಿದೆ. ಬಹುತೇಕ ಉತ್ತರ ಕರ್ನಾಟಕದ ಪ್ರಮುಖ ಸ್ತ್ರೀ ದೇವತೆಗಳ ಪುರಾಣಗಳಲ್ಲಿ ಈ ರೇಣುಕೆಲ್ಲಮ್ಮನ ಹಿನ್ನೆಲೆಯೇ ಬರುವುದನ್ನು ಕಾಣಬಹುದಾಗಿದೆ. ಮತ್ತು ಉಚ್ಚಂಗೆಮ್ಮನ ಭಕ್ತರಾಗಲಿ, ಜೋಗತಿಗಳಾಗಲಿ, ಸವದತ್ತಿ ಎಲ್ಲಮ್ಮನಿಗೆ ನಡೆದು ಕೊಳ್ಳುವುದಿಲ್ಲ. ಸವದತ್ತಿಯ ಭಕ್ತರಾಗಲೀ ಜೋಗತಿಗಳಾಗಲಿ ಈ ದೇವಿಗೆ ನಡೆದು ಕೊಳ್ಳುವುದು ತೀರಾ ವಿರಳ. ಉಚ್ಚಂಗೆಮ್ಮನ ದೇವಾಲಯಗಳು ಬಳ್ಳಾರಿ, ಶಿವಮೊಗ್ಗ, ಚಿತ್ರದುರ್ಗ, ಜಿಲ್ಲೆಗಳಲ್ಲಿದ್ದು ಉತ್ಸವಾಂಭವೆಂದು ಕರೆದು ಪೂಜಿಸುವದುಂಟು. ಉಚ್ಚಂಗಿದುರ್ಗದ ಬೆಟ್ಟದ ಕೆಳಗೆ ಇತ್ತೀಚೆಗೆ ನಿರ್ಮಾಣಗೊಂಡಿರಬಹುದಾದ ಪರಶುರಾಮನ ಹೆಸರಿನ ಗುಡಿಯೊಂದಿದ್ದರೂ, ಅದಕ್ಕೆ ಪಾದಗುಡಿ ಎಂದು ಅನೇಕರು ಹೆಸರಿಸುತ್ತಾರೆ. ಉಚ್ಚಂಗೆಮ್ಮನ ಪಾದದ ಗುರುತುಗಳಿರುವುದರಿಂದ ಹೀಗೆ ಕರೆಯುತ್ತಾರೆ ಎನ್ನುವುದು ಸ್ಥಳೀಯರ ಅಭಿಪ್ರಾಯವಾಗಿದೆ. ಅಲ್ಲದೆ ಉಚ್ಚಂಗಿ ದೇವಿ ಉಚ್ಚಂಗೆಮ್ಮ, ಉತ್ಸವಾಂಭ ಈ ಹೆಸರುಗಳನ್ನು ಹೆಚ್ಚು ಜನ ಬಳಸುವುದು ಕಂಡುಬರುತ್ತದೆ. ಇಂದಿನ ಉಚ್ಚಂಗೆಮ್ಮ ಗುಡಿಯ ಮೇಲೆ ಉತ್ಸವಾಂಭ ದೇವಾಲಯವೆಂದು ನಾಮ ಫಲಕವಿದೆ. ಈ ಮೇಲಿನ ಪುರಾಣಗಳನ್ನಿಟ್ಟುಕೊಂಡು ಜನಪದರ ಹೇಳಿಕೆಗಳನ್ನು ಗಮನಿಸಬೇಕಾಗುತ್ತದೆ.

<u>ಜನಪದೀಯ ಅಂಶಗಳಲ್ಲಿ ಉಚ್ಚಂಗೆಮ್ಮ — ಉಚ್ಚಂಗಿದುರ್ಗ:</u>

ಒಂದನೆಯದಾಗಿ ಶಿವಮೊಗ್ಗ ಜಿಲ್ಲೆಯ ಹಿರೇ ಮಾವುರಿನಿಂದ ಬಂದ ಈ ದೇವತೆ ಮಾಕ್ಕಗಳಗೇರಿಯಲ್ಲಿ ವಾಸ್ತವ್ಯ ಮಾಡಿದಳಂತೆ. ತನ್ನ ಮನಸ್ಸಿನ ಇಚ್ಛೆಯಂತೆ ಮಾಕ್ಕಗಳ ಗೇರಿಯಿಂದ ಪೂರ್ವಕ್ಕೆ ಪ್ರಯಾಣ ಬೆಳೆಸಿದಳು. ಬೇಸಿಗೆ ಕಾಲವಾದ್ದರಿಂದ ದಣಿವಾರಿಸಿಕೊಳ್ಳಲು ಇಂದಿನ ಉಚ್ಚಂಗಿದುರ್ಗದ ಪಶ್ಚಿಮಕ್ಕಿರುವ ಮರದ ತೋಪಿನಲ್ಲಿ ಕುಳಿತುಕೊಳ್ಳಲಾಗಿ, ಮತ್ತು ಬಾಯಾರಿಕೆಯಾದ್ದರಿಂದ ನೀರಿಗಾಗಿ ಹಂಬಲಿಸಿದಳು. ಆಗ ಅಲ್ಲಿ ಇದ್ದ ಕುರುಬರು ತಮ್ಮ ಬಳಿಯೂ ನೀರಿಲ್ಲದಿದ್ದರಿಂದ ಕುರಿಯ ಹಾಲನ್ನು ಕೊಟ್ಟರಂತೆ ಅದನ್ನೇ ಕುಡಿದು ಬಾಯಾರಿಕೆ ಕಳೆದುಕೊಂಡು ಇವಳು ಇಲ್ಲಿಗೆ ಬರುವ ಜನರಿಗೆಲ್ಲ ಹಾಲನಂತ ನೀರು ಸಿಗಲೆಂದು ಹರಸಿದಳಂತೆ. ಅಲ್ಲಿಂದ ಮುಂದುವರೆದು ಅವಳು ಎತ್ತರವಾದ ಬೆಟ್ಟದ ಮೇಲೆ ನೆಲೆಸಿದ್ದಳೆಂದು ಈ ಹಿಂದೆ ಈ ಸ್ತ್ರೀ ದಣಿವಾರಿಸಿಕೊಳ್ಳಲು ಕುಳಿತುಕೊಂಡ ಪ್ರದೇಶದಲ್ಲಿ ಕುರುಬರು ಬಾವಿ ತೆರೆಯಲಾಗಿ ಅಲ್ಲಿ ಹಾಲನಂತ ನೀರು ಕಂಡು ಬಂದಿತಂತೆ. ಹಾಗಾಗಿ ಈ ಸ್ತ್ರೀ ಹರಸಿದ ಹರಕೆ ನೆನಪಾಗಿ ಇವಳನ್ನು ಹುಡುಕಿಕೊಂಡು ಬಂದರಂತೆ, ಹೀಗೆ ಸುತ್ತಲಿನ ಜನತೆಗೆ ದೇವಿಯಾಗಿ ಮಾರ್ಪಾಡಾದಳೆಂದು, ಆಕೆ ನೆಲಸಿದ ಪರ್ವತ ಉಚ್ಚ — ಎತ್ತರವಾದ್ದರಿಂದ ಉಚ್ಚಂಗಿ ದೇವಿಯಾದಳು. ಆಸ್ಥಳಕ್ಕೆ ಉಚ್ಚಂಗಿ ಎಂದು ಅಲ್ಲಿಯ ಅರ್ಚಕರಾನೇಕರು ಅಭಿಪ್ರಾಯಪಡುತ್ತಾರೆ. ಮತ್ತು ಉಚ್ಚಂಗೆಮ್ಮ ಕುಳಿತುಕೊಂಡಿದ್ದ ತೋಪಿಗೆ ಹಾಲಮ್ಮನ ತೋಪು, ಆಕೆ ನೆಲೆಸಿದ್ದ ಮಾಕ್ಕಗಳಕೇರಿಯಲ್ಲಿ ಆಕೆಯ ಗುಡಿಯಿರುವದರಿಂದ ಇದನ್ನು ಅವರು ಸಮರ್ಥಿಸಿಕೊಳ್ಳುತ್ತಾರೆ.

ಎರಡನೆಯದಾಗಿ ಊರಿಗೆ ತುಂಬಾ ತೊಂದರೆಯಾಗಿತ್ತು. ಎತ್ತಲಿಂದಲೋ ಬಂದ ಸಿದ್ಧರು ಮಾಟ, ಮಂತ್ರ ತಂತ್ರಗಳಿಂದ ಜನರನ್ನು ಭೀತಿಗೊಳಿಸಿದ್ದರು. ಸುತ್ತು,ಹಳ್ಳಿಗಳಿಗೂ ಇವರು ಒಂದು ಸಮಸ್ಯೆಯಾಗಿದ್ದರು . ಇಂತಹ ಸಂದರ್ಭದಲ್ಲಿ ದೇವತಾ ಸ್ತ್ರೀಯೊಬ್ಬಳು ಅಂದವಾಗಿದ್ದ ಈ ಬೆಟ್ಟದ ಮೇಲೆ ಬಂದು ನೆಲೆಸಿದಳು. ಜನರಿಗೂ ಮತ್ತು ಇವಳಿಗೂ ಈ ಸಿದ್ಧರಿಂದ ತುಂಬಾ ತೊಂದರೆಯಾಗುತ್ತಿತ್ತು. ಸಿದ್ಧರಿಗೆ ಊಟ, ಉಪಚಾರ ಮಾಡಿಸುವುದು ಇವಳ ಕಾರ್ಯಗಳಾಗಿದ್ದುವು. ಹೀಗಾಗಿ

ಇವಳೊಂದು ದಿನ ಅಡಿಗೆಯು ಜೊತೆಗೆ ಭಂಗಿ ಪುಡಿಯನ್ನು ಸೇರಿಸಿದ್ದಳು. ಇದನ್ನು ಸೇವಿಸಿದ ಮತ್ತು ಪಾನಮತ್ತರಾದ ಸಿದ್ಧರು ಇವಳನ್ನು ಮೋಹಿಸಲು ಹೋದರಂತೆ. ಸಿಟ್ಟಿಗೆದ್ದು ಈಕೆ ತನ್ನ ಉಚ್ಚಿಯಿಂದಲೇ ಇವರನ್ನು ಗುಡ್ಡದ ಮೇಲಿನಿಂದ ಕೆಳಕ್ಕೆ ತೇಲಸಿದಳಂತೆ. ಹೀಗೆ ಉಚ್ಚಿಯಿಂದಲೇ ತೇಲಸಿ ಜನರಿಗೆ ಬಂದ ಸಾಕಷ್ಟು ಸಂಕಷ್ಟವನ್ನು ಪರಿಹರಿಸಿದ್ದರಿಂದ ಉಚ್ಚಿದೇವಿ. ಅಥವಾ ಉಚ್ಚಂಗಿದೇವಿಯಾದಳೆಂದು ಅವಳ ನೆಲಿಸಿದ ಸ್ಥಳ ಉಚ್ಚಂಗಿಯಾಯಿತ್ತೆಂದು ಅಭಿಪ್ರಾಯ ಪಡುತ್ತಾರೆ.

ಕೆಲವು ಹಿರಿಯ ಸಿದ್ಧರು ಇಲ್ಲೇ ಉಳಿದುಕೊಂಡರು. ಅವರೇ ಇಂದು ರಾಜನ ಅರಮನೆ ಮುಂದಿರುವ ಭೈರಿಸಿದ್ಧ ದೇವಸ್ಥಾನದ ಮುಂದಿರುವ ಬದನೆಕಾಯಿಸಿದ್ಧ ಬಾಳೆಸಿದ್ಧ ದೇವಸ್ಥಾನದ ಹಿರೇಸಿದ್ಧ ಎಂದು ಅಲ್ಲಿಯವರಾನೇಕರು ಹೇಳುತ್ತಾರೆ.

ಸಧ್ಯಕ್ಕೆ ಜನಪದರ ಹೇಳಿಕೆಗಳನ್ನು ಒಪ್ಪಿಬಹುದಾದರೂ ರೇಣುಕೆಲ್ಲಮ್ಮನ ಬಗೆಗಿರುವ ವೃತ್ತಾಂತದೊಂದಿಗೆ ಈ ಸಂಬಂಧವನ್ನು ಪೂರ್ಣ ಕಡೆಗಣಿಸಲಿಕ್ಕಾಗದು.

ಅಧ್ಯಾಯ — ಐದು :

ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಉಚ್ಚಂಗಿದುರ್ಗ

ಉಚ್ಚಂಗಿದುರ್ಗದ ಶಾಸನಗಳಲ್ಲಿ ಬರುವ ದಾನ ದತ್ತಿಗಳ ಉಲ್ಲೇಖ :

ಉಚ್ಚಂಗಿ ದುರ್ಗದಲ್ಲಿ ಲಭ್ಯವಾದ ಶಾಸನಗಳಲ್ಲಿ ಬರುವ ದಾನ ದತ್ತಿಗಳ ಉಲ್ಲೇಖ ಗಳನ್ನು ಪರಿಶೀಲಿಸುವುದೇ ಪ್ರಸ್ತುತ ಅಧ್ಯಾಯದಲ್ಲಿರುವ ಈ ಭಾಗದ ಉದ್ದೇಶವಾಗಿದೆ. ಉಚ್ಚಂಗಿ ದುರ್ಗದಲ್ಲಿ ಕಲ್ಯಾಣ ಚಾಲುಕ್ಯರ, ಮತ್ತು ಅವರ ಮಾಂಡಳೀಕ ಪಾಂಡ್ಯರ ಹೊಯ್ಸಳರ, ವಿಜಯನಗರ ಅರಸರ ಮತ್ತು ಪಾಳೇಗಾರರ ಕಾಲದ ಸು. 19 ಶಾಸನಗಳು ದೊರೆತಿದ್ದು, ಅವುಗಳಲ್ಲಿ ದಾನ ಶಾಸನಗಳು ಅಧಿಕವಾಗಿದ್ದಂತೆ ತೋರುತ್ತದೆ. ಶಾಸನಗಳ ಕೆತ್ತನೆಗಾಗಿ ಗ್ರಾನೈಟ ಶಿಲೆ, ಬಳಪದ ಕಲ್ಲುಗಳನ್ನು ಉಪಯೋಗಿಸಿದ್ದು ಕಲ್ಲು ಬಂಡೆ, ಕಲ್ಲಿನ ಮೂರ್ತಿಗಳನ್ನು, ವೀರಗಲ್ಲುಗಳನ್ನೂ, ದೇವಾಲಯದ ಗೋಪುರ ವನ್ನೂ, ಗಂಟೆಗಳನ್ನು ಶಾಸನಗಳ ಕೆತ್ತನೆಗಾಗಿ ಬಳಸಿಕೊಂಡಿರುವುದು ಗೋಚರಿಸುತ್ತದೆ.

ಇತಿಹಾಸ ಅಧ್ಯಯನಕ್ಕೆ ಶಾಸನಗಳು ಪ್ರಮುಖ ಆಕರಗಳಾಗಿವೆ ಎಂಬುದು ಗತಿಸಿದ ಸತ್ಯ. ಇವುಗಳಲ್ಲಿ ಬರುವ ದಾನದತ್ತಿಗಳನ್ನು ಕುರಿತು ಅಧ್ಯಯನಿಸುದರಿಂದ ಅಂದಿನ ಸಮಾಜದ ಸಮಕಾಲಿನ ಸ್ಥಿತಿಗತಿಗಳನ್ನು ಮತ್ತು ಆರ್ಥಿಕ ಸ್ಥಿತಿಗತಿಗಳೊಂದಿಗೆ ಅವರ ಕಲಾಭಿರುಚಿಯನ್ನು ತಿಳಿಸುತ್ತವೆ ಎನ್ನುವುದು ಹೊಸ ಸಂಗತಿಯೇನಲ್ಲ.

ನೆಂಗಿ ಮಣ್ಡಳೀಶ್ವರ ವಿಷ್ಣುವರ್ಧನ ರಾಜ ವಿಜಯಾದಿತ್ಯ ದೇವರು ನೊಳಂಬವಾಡಿ ಮುವತ್ತೆರಡು ಸಾವಿರವನ್ನು ಕ್ರಿ.ಶ. 1064ರಲ್ಲಿ ಆಳುವಾಗ ಅನೇಕ ದಂಡನಾಯಕರು ಸೇರಿ ದಾನಬಿಟ್ಟ ಉಲ್ಲೇಖಗಳನ್ನು ಕಾಣಬಹುದಾಗಿದೆ. ''ವನದ ಹಬ್ಬದ ನಿಮಿತ್ತ, ಗಳಗೇಶ್ವರ ದೇವರಿಗೆ ಉಚ್ಚಂಗಿ ಕೋಟೆಯ ದಕ್ಷಿಣಭಾಗದಲ್ಲಿ ಬಿಟ್ಟ ಭೂಮಿ ದೇವರಿಗೊಂದು ಭಾಗ, ಮರಕ್ಕೆರಡು ಭಾಗ, ದೇಗುಲದ ಅಧಿಷ್ಠಾನವನ್ನು ಕಟ್ಟಿಸಿ, ಮಠದ ಮುಗ್ಗಲು ಬಾವಿಯನ್ನು ತೋಡಿಸಿದರು ಮತ್ತು ರಾಮಿಘಟ್ಟವನ್ನು ದಾನ ಬಿಡುವ ಉಲ್ಲೇಖಗಳು ಬರುವುವು.[1]

ಉಚ್ಚಂಗಿ ದುರ್ಗದ ಚಿಕ್ಕ ಹೊಂಡದ ಆವರಣದಲ್ಲಿರುವ ಶಾಸನಗಳಲ್ಲಿರುವಂತೆ ಕ್ರಿ.ಶ. 1064 ರಲ್ಲಿ ವಿಷ್ಣುವರ್ಧನ ವಿಜಯಾದಿತ್ಯನು ನೊಳಂಬವಾಡಿ 32,000ವನ್ನು ಆಳುವಾಗ ಮೊರೇಶ್ವರ ದೇವರಿಗೆ ಉಚ್ಚಂಗಿ ಕೋಟೆಯ ನೈರುತ್ಯದ ಪಶ್ಚಿಮದ ಕೆರೆಯ ಕೆಳಗಣ ಗದ್ದೆಯ 1 ನಿವರ್ತನ್ನನೆ ತೋಂಟ ನಿತ್ಯವುಂ ಇದ್ದು ಈ ಕೆರೆಯ ಭೂ ದೇವರ್ಗೆ

ಒಂದು ಭಾಗ, ಮಠಕ್ಕೆ ಎರಡು ಭಾಗ ದಾನ ಬಿಟ್ಟಿರುವುದು ತಿಳಿದು ಬರುತ್ತದೆ.[2]

ಇದೇ ವಿಷ್ಣುವರ್ಧನ ವಿಜಯಾದಿತ್ಯನು ತ್ರೈಲೋಕೇಶ್ವರ ದೇವರಿಗೆ ದಾನ ಬಿಟ್ಟ ಸಂಗತಿಯು ಕಂಡುಬರುವುದು[3] ಉಚ್ಚಂಗಿ ದುರ್ಗದ ಪೂರ್ವ ಭಾಗದ ಹೊಲದಲ್ಲಿರುವ ಶಾಸನದಲ್ಲಿಯು ನೊಳಂಬವಾಡಿ ಪೆರ್ಮಾಡಿ ಜಯಸಿಂಹನು ಉಚ್ಚಂಗಿ ಕೋಟೆಯ ಮೇಗಣ ತ್ರೈಲೇಶ್ವರ ದೇವರ ಭೋಗಕ್ಕೆ ಗಂಟಗನ ಕೆರೆಯನ್ನು ಬಿಟ್ಟು ಕೊಟ್ಟಿರುವುದು ತಿಳಿದು ಬರುತ್ತದೆ.[4]

ಉಚ್ಚಂಗಿಯ ಕೋಟೆಯ ತೆಂಕಣ ಅರಸನ ಕೆರೆಯ ಕೆಳಗಣ ಭಾಗದಲ್ಲಿ ನಿಚ್ಚವಳಪೋರ್ವ ಬ್ರಾಹ್ಮಣನಿಗೆ ಹದಿನೈದು ಮತ್ತರು ಬೆದ್ದಲೆಯನ್ನು, ಅಕ್ಕಿ—ಮಾ 5 ಹೆಸರು—1 ತುಪ್ಪ ಹೋಳಿಸೆಗೆ—2 ಮೊಸರು—ಬ—1 ಅಳಲು—1 ಅಡಕೆ—2 ಎಲೆ—4 ಪಡಿಯುಲು ನಡ—ಶಿ—5 ಇತ್ಯಾದಿ ದಾನನೀಡಿದ ವಿವರಗಳು ಕಂಡುಬರುತ್ತವೆ.[5]

ಮಹಾ ಮಂಡಳೇಶ್ವರ ವೀರ ಪಾಂಡ್ಯನು ಉಚ್ಚಂಗಿಯುಂದ ನೊಳಂಬವಾಡಿ 32000 ವನ್ನು ಆಳುವಾಗ ನೊಂಯ್ಯೇಶ್ವರ ದೇವರಿಗೆ ಕುಂಬಾರ ಗೆರೆ ಕೆಳಗಿನ ಗದ್ದೆಯನ್ನು ಮತ್ತು ಪೂರ್ವಕ್ಕೆ ಹತ್ತು ಮತ್ತರು ಬೆದ್ದಲೆಯನ್ನು ಬಡಗಿ ಕೆರೆಯ ಕೆಳಗಣ ಗದ್ದೆಯನ್ನು, ಆ ಕೆರೆಯ ಬಡಗಣ ಕೋಟೆಯ ನಾಲ್ಕು ಮತ್ತರು ಬೆದ್ದಲೆಯನ್ನು ಶಿವ ಬ್ರಾಹ್ಮಣನುಂಯ್ಯ ಕೊಣ್ಡ ಭಟ್ಟರ ಕಾಲಂಕರ್ಚಿ ಧಾರಪೂರ್ವಕಂ ಮಾಡಿ ಕೊಟ್ಟಿರುವ ಅಂಶ ತಿಳಿದುಬರುತ್ತದೆ.[6]

ತ್ರಿಭುವನ ಮಲ್ಲ ಪಾಂಡ್ಯ ದೇವರು ನೊಳಂಬವಾಡಿ ಮೂವತ್ತೆರಡು ಸಾವಿರ ವನ್ನು ಆಳುವಾಗ ಉಚ್ಚಂಗಿ ಕೋಟೆಯ ಉಚ್ಚಂಗಿ ದೇವಿಗೆ ಕೊಡಲಾರು, (ಸಂ)ಶಂಕರ ನಾರಾಯಣ ತೀರ್ಥ ಧಾರಪೂರ್ವಕವಾಗಿ ಬಿಟ್ಟ ವಿಷಯ ತಿಳಿದುಬರುತ್ತದೆ.[7]

ವಿಜಯ ಪಾಂಡ್ಯದೇವರು ನರಸಿಂಹ ದೇವರಿಗೆ ಪೂರ್ವದಿಕ್ಕಿನ ಕೆಂಗೆರೆಯ ಕೆಳಗೆ ಆರು ಮತ್ತರು ಬೆದ್ದಲೆಯನ್ನು ದತ್ತಿ ಬಿಟ್ಟಿರಬಹುದಾದುದು ತಿಳಿದುಬರುತ್ತದೆ.[8] ವೀರಪೆಂಪೆಯ ರಾಯರು ಎಕ್ಕನಾಥ ದೇವತೆಗೆ ಸಿಬಾರವನ್ನು ಮಾಡಿಸಿ ಧರ್ಮ ಬಿಟ್ಟ ಉಲ್ಲೇಖವಿದೆ.[9] ಕ್ರಿ.ಶ.1565 (1487ಶಕವರುಷ) ರಲ್ಲಿ ರಾಮರಾಜ ತಳವಾರಿ ಹಣವನ್ನು ದಾನವಾಗಿ ಉಚ್ಚಂಗಿ ದೇವಿಗೆ ಕೊಟ್ಟದ್ದು ತಿಳಿದುಬರುತ್ತದೆ.[10]

ಬಾಗಳಿ ಮುಮ್ಮಡಿ ಬಸಪ್ಪ ನಾಯಕರು ಕ್ರಿ.ಶ. 1708 (ಶಕವರುಷ 1630)ರಲ್ಲಿ ಉಚ್ಚಂಗೆಮ್ಮಗೆ ಗಂಟೆಯನ್ನು ದಾನ ಕೊಟ್ಟದು ಅದು ಘಂಟೆ–1ಕ್ಕೆ ತೂಕ ಮು–1 ಸೇ–1 ನಾಲ್ವತ್ತವಂದು ಸೇರು ಎಂದಿದೆ.[11] ಅಲ್ಲದೆ ಇನ್ನೊಂದು ಘಂಟೆಯನ್ನು ದಾನ ಮುಮ್ಮಡಿ ಬಸಪ್ಪನಾಯಕರೇ ದಾನ ನೀಡಿದ ಉಲ್ಲೇಖ ಅದರಲ್ಲಿ ಬರುತ್ತದೆ.[12]

ಶಾಸನಗಳಲ್ಲಿ ಬರುವ ಈ ದಾನ ದತ್ತಿಗಳ ಉಲ್ಲೇಖಗಳಲ್ಲಿ ಬರುವ ಕೆರೆ ಬಾವಿಗಳು ಬಹುತೇಕ ಅವಶಾಸನ ಹೊಂದಿವೆ ಮತ್ತು ಇಂದಿರುವ ಉಚ್ಚಂಗಿದುರ್ಗ ಮೂಲ ಊರಾಗದೆ ಅದು ಉಚ್ಚಂಗಿ ಕೋಟೆಯ ಆಗ್ನೇಯ ದಿಕ್ಕಿಗಿರಬಹುದಾದ ಉಲ್ಲೇಖಗಳು ಶಾಸನಗಳಲ್ಲಿ ವ್ಯಕ್ತವಾಗುತ್ತದೆ. ಉಚ್ಚಂಗಿದುರ್ಗದ ಪಟ್ಟಣವು ವಿಶಾಲವಾಗಿತ್ತೆಂದು ಗ್ರಹಿಸ ಬಹುದಾಗಿದೆ.

## ಉಚ್ಚಂಗಿ ದುರ್ಗದಲ್ಲಿ ಆಚರಿಸುವ ಹಬ್ಬಗಳು :

ಉಚ್ಚಂಗೆಮ್ಮ ದೇವಿಯ ಸಂಬಂಧವಾಗಿ, ಉಚ್ಚಂಗಿದುರ್ಗದಲ್ಲಿ ವಿಶೇಷ ಎರಡು ವಿಧವಾದ ಹಬ್ಬಗಳನ್ನು ಆಚರಿಸುತ್ತಾರೆ. ಒಂದನೆಯದು ಐದು ದಿನಗಳ ಕಾಲ ನಡೆಯುವ ಉತ್ಸವ ಎರಡನೆಯದು. ದೀರ್ಘವರ್ಷಗಳ ಅಂತರದಲ್ಲಿ ನಡೆಯುವ ಹಿರೇಹಬ್ಬ.

## ಯುಗಾದಿ ಹಬ್ಬ :

ಯುಗಾದಿ ಹಬ್ಬದ ಆಚರಣೆಯನ್ನು ಭಾರತದ್ಯಾಂತ ವಿಭಿನ್ನ ಮುಖಗಳಲ್ಲಿ ಆಚರಿಸುತ್ತಿರುವುದನ್ನು ನಾವು ಕಾಣಬಹುದಾಗಿದೆ. ಅದೇ ರೀತಿಯಾಗಿ ಉಚ್ಚಂಗಿ ದುರ್ಗದಲ್ಲಿ ಯುಗಾದಿ ಆಚರಣೆಯನ್ನು ಉಚ್ಚಂಗೆಮ್ಮನ ಹೆಸರಿನಲ್ಲಿ ಮಾಡುತ್ತಿದ್ದು, ಇದು ಪ್ರತಿ ವರ್ಷವು ಜರುಗುತ್ತದೆ.

ಈ ಹಬ್ಬಕ್ಕೆ ಪೂರ್ವ ಭಾವಿಯಾಗಿ ಹಣ ಸಂಗ್ರಹ ಮಾಡದಿದ್ದರೂ ಅಪೇಕ್ಷಿತ ಭಕ್ತರು ದೇಣಿಗೆಯಾಗಿ ಹಣವನ್ನು ನೀಡಬಹುದಾಗಿದ್ದು, ಪರಊರಿನಿಂದ ಬರುವ ದೇವಿಭಕ್ತರೆಲ್ಲರೂ ಹಬ್ಬಕ್ಕಿಂತ ಮೊದಲೇ ಹಣವನ್ನು ಉಚ್ಚಂಗಿ ದೇವಿಯ ಹೆಸರಿನಲ್ಲಿ ಹಬ್ಬ ಆಚರಿಸಲು ವ್ಯವಸ್ಥೆ ಮಾಡಲಿರುವ ಉಸ್ತುವಾರಿಗಳಿಗೆ ಕಳಿಸಿಕೊಡುತ್ತಾರೆ. ಹಬ್ಬದ ಆಚರಣೆ ಮಾಡಲಿಕ್ಕೆ ದೊಡ್ಡ ಪ್ರಮಾಣದ ಕುರಿ ಮತ್ತು ಮೇಕೆಗಳ ಅವಶ್ಯಕತೆಗಳನ್ನು ಉಚ್ಚಂಗಿದುರ್ಗದ ಕುರುಬ ಜನಾಂಗವೇ ಉಚಿತವಾಗಿ ನೀಗಿಸುತ್ತದೆ.

ಈ ಹಬ್ಬದಲ್ಲಿ ಬರುವ ‘ಬಲಿ’ ಗೆ ಸಂಬಂಧಪಟ್ಟ ಕಾರ್ಯಗಳೆಲ್ಲವೂ ಹಾಲಮ್ಮನ ತೋಪಿನಲ್ಲಿ ನಡೆಯುತ್ತವೆ. ಹಾಲಮ್ಮನ ತೋಪು, ಉಚ್ಚಂಗಿ ದುರ್ಗದ ಬೆಟ್ಟದ ಪಶ್ಚಿಮಕ್ಕೆ ಒಂದು ಕಿ.ಮೀ. ದೂರದಲ್ಲಿದೆ. ಅಲ್ಲಿಂದಲೇ ನೆರೆದ ಭಕ್ತರ ಸಮೂಹ ಉಚ್ಚಂಗಿ ದುರ್ಗದ ಪೂರ್ವ ಭಾಗ ದಾವಣಗೇರಿಯ ರಸ್ತೆಯವರೆಗೆ ಹಬ್ಬಿರುತ್ತದೆ. 1.25 ಕಿ.ಮೀ. ಉಚ್ಚಂಗಿಯ ದುರ್ಗದ ಉತರ ದಕ್ಷಿಣವಾಗಿ ಬೆಟ್ಟದ ವಿಸ್ತಾರವಿದ್ದು, ಇವರ ತುಂಬಾ ಜನರು ಅಲ್ಲಲ್ಲಿ ತಾತ್ಕಾಲಿಕ ನಿವಾಸಗಳನ್ನು ಮಾಡಿಕೊಂಡಿರುತ್ತಾರೆ. (ಹಬ್ಬಕೆ ಹೊರಗಿನಿಂದ ಬಂದವರು)

ಸತತವಾಗಿ ಮೂರು ದಿನಗಳವರೆಗೆ ಆಚರಿಸಲ್ಪಡುವ ಹಬ್ಬದ ಮೊದಲ ಹಿಂದಿನ ದಿನವೇ ಉಚ್ಚಂಗೆಮ್ಮನ ಅರ್ಚಕ ಬೆಟ್ಟದ ಪೂರ್ವ ಕೆಳಭಾದಲ್ಲಿರುವ ಓಕುಳಿ ಗುಣಿಗೆ ನೀರು ಹಾಕಿಸುತ್ತಾನೆ. ಸು. 10 ಅಡಿ ಆಳವಾಗಿರುವ ಈ ಓಕುಳಿಗುಣಿಯನ್ನು ಹರಿಜನರನ್ನು ಹೊರತುಪಡಿಸಿ ಎಲ್ಲ ಜನಾಂಗದವರು ತುಂಬಸಬಹುದು. ನಂತರದ ಅದೇ ದಿನ ಸಂಜೆ ದೇವಿಯನ್ನು ಬೆಟ್ಟದಿಂದ ಕೆಳಗೆ ಗಂಗೆ ಪೂಜೆಗಾಗಿ ಕರೆತರುತ್ತಾರೆ. ಆ ದಿನವೇ ಮರಳಿ ಮೇಲೇರುತ್ತಾಳೆ ಇಲ್ಲಿಂದಲೇ ಹಬ್ಬದ ಪ್ರಾರಂಭವನ್ನು ಕಾಣುತ್ತೇವೆ.

ಹಬ್ಬದ ಎರಡನೆಯ ದಿನ ಉಚ್ಚಂಗಿ ದೇವಿಯನ್ನು ಹೊಸ ವಸ್ತ್ರ ಹಾಗೂ ಆಭರಣಗಳಿಂದ ಅಲಂಕರಿಸುತ್ತಾರೆ. ಮತ್ತು ಉತ್ಸವ ಮೂರ್ತಿಯನ್ನು ಉಚ್ಚಂಗಿ ದುರ್ಗದಲ್ಲಿ ಮೆರವಣಿಗೆ ಮಾಡುತ್ತಾರೆ. ಇದು ಧೀರ್ಘ ಗಂಟೆಗಳವರೆಗೆ ನಡೆಯುತ್ತದೆ. ಅದೇ ದಿನ ಸು. 4 ಗಂಟೆಗೆ ಓಕುಳಿ ಕಾರ್ಯಕ್ರಮವಿರುತ್ತದೆ. ಇದು ಓಕುಳಿ ಗುಣಿಯಲ್ಲಿಯೇ ಜರುಗುತ್ತದೆ. 10 ಅಡಿ ಉದ್ದಗಲ ಮತ್ತು ಆಳವನ್ನು ಹೊಂದಿದ, ನೀರು ತುಂಬಿದ ಗುಣಿಯ ಮೇಲ್ಭಾಗದಲ್ಲಿ 8 ಅಡಿಯ ಅಂತರದಲ್ಲಿ ತೆಂಗಿನ ಕಾಯಿಗಳನ್ನು ಕಟ್ಟಿರುತ್ತಾರೆ. ಇವುಗಳನ್ನು ಕಿತ್ತು ಕೊಂಡು ನೀರಿನಲ್ಲಿ ಬೀಳುವುದೇ ಓಕುಳಿ. ತೆಂಗಿನಕಾಯಿ ಕಿತ್ತವರಿಗೆ ಒಳ್ಳೆಯದಾಗುತ್ತದೆಂಬ ಪ್ರತೀತಿ ಇದ್ದು ಈ ಕಾರ್ಯಕ್ರಮದಲ್ಲಿ ಮುಸ್ಲಿಂರು ಮತ್ತು ಹರಿಜನರನ್ನು ಬಿಟ್ಟು ಎಲ್ಲಾರೂ ಭಾಗವಹಿಸಬಹುದು. ಹಬ್ಬದ 3ನೆಯ ದಿನ ಉತ್ಸವ ಮೂರ್ತಿಗೆ ಆನೆಹೊಂಡದ ಪೂಜೆ ನಡೆಯುತ್ತದೆ. ಆನೆಹೊಂಡವು ಉಚ್ಚಂಗಿ ಬೆಟ್ಟದ ಕೋಟೆಯ ಮಧ್ಯದಲ್ಲಿದ್ದು, ಅದರ ಮೇಲ್ಭಾಗದ ಕಟ್ಟೆಯ ಮೇಲೆ ದೇವಿಯನ್ನು ಕುಳ್ಳಿರಿಸುತ್ತಾರೆ. ಮತ್ತು ವಿವಿಧ ರೀತಿಯ ಪೂಜೆಯ ನಂತರವೇ ದೇವಿ ಸ್ವಸ್ಥಾನಕ್ಕೆ ಮರಳುತ್ತಾಳೆ.

ಆ ದಿನ ರಾತ್ರಿ ದೇವಸ್ಥಾನದಲ್ಲಿ ಮತ್ತು ಅಲ್ಲಲ್ಲಿ ಚದುರಿರುವ ಗುಂಪುಗಳು ಹಾಡು, ಹರಿಕಥೆ, ದೇವಿಪುರಾಣ ಭಜನೆಯಲ್ಲಿ ತೊಡಗಿರುತ್ತವೆ. ಇಲ್ಲಿ ಚಾಡಿಕೆಯವರದೂ ಒಂದು ಗುಂಪು ಹೀಗೆ ವಿವಿಧ ರೀತಿಯ ಮನೋರಂಜನೆ ಕಾರ್ಯಕ್ರಮಗಳ ಜೊತೆ ನಾಟಕ, ಮತ್ತು ಕುಸ್ತಿಯ ಸ್ಪರ್ಧೆಗಳನ್ನು ಏರ್ಪಡಿಸುತ್ತಾರೆ. ಹೀಗೆ ಮೂರು ದಿನಗಳ ಕಾಲ ನಡೆಯುವ ಈ ಹಬ್ಬಕ್ಕೆ ಕರ್ನಾಟಕದ ಮೂಲೆ ಮೂಲೆಗಳಿಂದ ಜನ ಬರುವುದಲ್ಲದೆ, ಆಂಧ್ರ ಪ್ರದೇಶ ಮತ್ತು ಮಹಾರಾಷ್ಟ್ರಗಳಿಂದಲೂ ಬರುತ್ತಾರೆ.

ಈ ಹಬ್ಬದಲ್ಲಿ ಉಚ್ಚಂಗೆಮ್ಮನನ್ನೇ ಮನೆದೇವರನ್ನಾಗಿ ಮಾಡಿಕೊಂಡವರ ಪಾತ್ರ ಮತ್ತು ವಿವಿಧ ಜನಾಂಗಗಳ ಜೊತೆ ಈ ಹಬ್ಬದ ಸಂಬಂಧ ಕುರಿತಾಗಿ ''ಉಚ್ಚಂಗೆಮ್ಮ ಮತ್ತು ಜನಪದರ ಸಂಬಂಧಾತ್ಮಕತೆಯಲ್ಲಿ'' ಚರ್ಚಿಸಲಾಗಿದೆ. ಈ ಹಬ್ಬದಲ್ಲಿನ ವಿಶೇಷ ಅಡುಗೆಗಳೆಂದರೆ ಹೋಳಿಗೆ, ಹುಗ್ಗಿ, ಕರ್ಜಿಕಾಯಿ, ಕಡುಬು, ಶಾವಿಗೆ ಮತ್ತು ಇವುಗಳ ಜೊತೆಗೆ ಕೆಳವರ್ಗದ ಜನರು (ಕುರಿ, ಮೇಕೆ, ಮತ್ತು ಕೋಳಿ) ಮಾಂಸದ ಅಡುಗೆಯನ್ನು ಮಾಡುತ್ತಾರೆ.

## ಹಿರೇಹಬ್ಬದ ಆಚರಣೆ :

ಇದರ ಹೆಸರೇ ಸೂಚಿಸುವಂತೆ ದೊಡ್ಡದಾದ ಮತ್ತು ವರ್ಷ ವರ್ಷಾಂತರಗಳಲ್ಲಿ ಆಚರಿಸುವ ಒಂದು ವಿಶಿಷ್ಟ ಬಗೆಯ ಹಬ್ಬವಾಗಿದೆ. ಈ ಹಿಂದೆ ಹಬ್ಬವು ಸಾಮಾನ್ಯವಾಗಿ 3 ವರ್ಷಕ್ಕೊಮ್ಮೆ ನಡೆಯಬೇಕು. ಕೆಲವು ಬಾರಿ 11 ವರ್ಷದವರೆಗೂ ಮುಂದೂಡಲ್ಪಡುತ್ತದೆ. ಇದು ತುಂಬಾ ಕರ್ಚಿನ ಮತ್ತು ದೊಡ್ಡ ಹಬ್ಬವಾದ್ದರಿಂದ ಉತ್ತಮ ಮಳೆ, ಬೆಳೆ ಆದಾಗ ಈ ಹಬ್ಬವನ್ನು ಆಚರಿಸುತ್ತಾರೆ. ವರ್ಷಾಂತ್ಯದ ಡಿಸೆಂಬರ್ ಮತ್ತು ವರ್ಷಾರಂಭದ ಜನವರಿ ಜಾತ್ರೆ ನಡೆಯಲು ಸೂಕ್ತ ಸಮಯವಾದ್ದರಿಂದ ಸಾಮಾನ್ಯವಾಗಿ ಈ ದಿನಗಳಲ್ಲಿ ಆಚರಿಸುತ್ತಾರೆ. ಊರಿನ ಅಭ್ಯುದಯಕ್ಕಾಗಿ ಜನರ ಆರೋಗ್ಯ ಕ್ಷೇಮಕ್ಕಾಗಿ ಸಮಾಜ ಕಲ್ಯಾಣದ ಉದ್ದೇಶದೊಂದಿಗೆ ಎಲ್ಲಾ ಜಾತಿಗಳವರೂ ಒಟ್ಟಾಗಿ ಸೇರಿ ಭಾವನಾತ್ಮಕ ಏಕತೆಯನ್ನು ಹೊಂದುವುದೂ ಈ ಹಬ್ಬ ಜಾತ್ರೆಗಳ ಉದ್ದೇಶವಾಗಿರುವುದು.

## ಹಬ್ಬದ ವಿವರಗಳು: ಪೂರ್ವ ಭಾವಿತಯಾರಿ:-

ಈ ಹಬ್ಬವು ನಿರ್ಧಿಷ್ಟವಾದ ವರ್ಷದಂದು ನಡೆಯುವುದಿಲ್ಲವಾದ್ದರಿಂದ ಮಳೆ, ಬೆಳೆಯು ಚೆನ್ನಾಗಿ ಬಂದ ವರ್ಷದ ಕೊನೆಯಲ್ಲಿ ಒಂದು ದಿನವನ್ನು ನಿಶ್ಚಯ ಮಾಡಿಕೊಂಡು ಊರಿನ ಎಲ್ಲಾ ಜನಾಂಗದ ಒಬ್ಬೊಬ್ಬ ಪ್ರಮುಖರು ಸೇರುತ್ತಾರೆ. ಅಲ್ಲಿ ಹಬ್ಬದ ವಿವಿಧ ಕಾರ್ಯಗಳನ್ನು ಹೇಗೆ ಮಾಡಬೇಕು ಮತ್ತು ಯಾರು ಮಾಡಬೇಕು ಹಬ್ಬದ ಸ್ವರೂಪ ಹೇಗಿರಬೇಕು ಇತ್ಯಾದಿ ಚರ್ಚಿಸುವದರೊಂದಿಗೆ ಹಬ್ಬದ ದಿನವನ್ನು ತೀರ್ಮಾನಿಸುತ್ತಾರೆ. ಈ ತೀರ್ಮಾನಿಸಿದ ವಿಷಯವನ್ನು ಹರಿಜನರಲ್ಲೊಬ್ಬ ಹಲಗೆಯ ಮೂಲಕ ಸಾರುತ್ತಾ ಊರಿನಲ್ಲಿರುವ ಎಲ್ಲರಿಗೂ ಸುದ್ದಿ ಮುಟ್ಟಿಸುವನು. ನಂತರದಲ್ಲಿ ಊರಿನ ಜನತೆ ಸುಣ್ಣ ಬಣ್ಣದ ತಯಾರಿಯೊಂದಿಗೆ ಬೀಗರುಗಳಿಗೆ ಸುದ್ದಿ ಮುಟ್ಟಿಸಿರುವರು. ಈ ನೆಪದಲ್ಲಿ ಊರಿನ ಎಲ್ಲ ದೇವಾಲಯಗಳು ಸುಣ್ಣಬಣ್ಣ ಕಾಣುವವು. ಈ ಹಬ್ಬ ತುಂಬಾ ದೊಡ್ಡದಾದರಿಂದ ಮತ್ತು ವಿಶೇಷ ರೀತಿಯಿಂದ ಆಚರಿಸಲ್ಪಡುವದರಿಂದ ಹಣದ ಅವಶ್ಯಕತೆ ಇರುತ್ತದೆ.

ಪ್ರತಿ ಮನೆಯಿಂದಲೂ ಒಂದು ಕನಿಷ್ಟ ದರವನ್ನು ನಿಶ್ಚಯಿಸಿ ಸಂಗ್ರಹಿಸುತ್ತಾರೆ. ಗರಿಷ್ಟ ಎಷ್ಟು ಬೇಕಾದರೂ ಕೊಡಬಹುದು. ಪರ ಊರಿನಿಂದಲೂ ಉಚ್ಚಂಗೆಮ್ಮನ ಭಕ್ತರು ಹಣದ ಅವಶ್ಯಕತೆಯನ್ನು ನೀಗಿಸಲು ಸಹಾಯ ಮಾಡುತ್ತಾರೆ. ಭಕ್ತರು ಹಬ್ಬಕ್ಕೆ ಕೆಲವು ದಿನ ಮುಂಚಿತವಾಗಿ ಹರಿಜನರು ಕೋಣವನ್ನು ಹುಡುಕಿ ತಂದು ಅಂಕೆಗೆ ಹಾಡುತ್ತಾರೆ. ಅಂಕೆಗೆ ಎಂದರೆ '' ಕೋಣದ ಕೊಬ್ಬಿನಂಶವನ್ನು ಕಡಿಮೆ ಮಾಡುವುದು ಸುಣ್ಣದ ನೀರನ್ನು ಕುಡಿಸಿ ಮದವನ್ನು ಕರಗಿಸುವುದೆಂದರ್ಥ '' ಮತ್ತು ಅದನ್ನು ಹರಿಜನರ ಕೇರಿಯಲ್ಲಿಯೇ ಕಟ್ಟುತ್ತಾರೆ. ಇದಕ್ಕೆ ಹರಿಜನರೇ ಜವಾಬ್ದಾರರು.

## ಹಬ್ಬ ನಡೆಯುವ ರೀತಿ :

ಸು. ನಾಲ್ಕು ದಿನಗಳವರೆಗೆ ಆಚರಿಸಲ್ಪಡುವ ಹಿರೇ ಹಬ್ಬವು ತನ್ನದೇ ಆದ ವಿಶಿಷ್ಟ ರೀತಿಯನ್ನು ಹೊಂದಿದೆ. ಸಕಲ ಪೂರ್ವ ಸಿದ್ಧತೆಗಳು ಮುಗಿದ ಒಂದು ಮಂಗಳವಾರ ಅಲಂಕಾರದೊಂದಿದಗೆ ಉಡಿ ತುಂಬಿಸಿ[13] ದೇವತೆಯನ್ನು ಆಸೀನ ಗೊಳಿಸುತ್ತಾರೆ. ಇಲ್ಲಿಂದಲೇ ಹಬ್ಬದ ಪ್ರಾರಂಭವನ್ನು ಕಾಣಬಹುದಾಗಿದೆ. ಮಂಗಳವಾರ ರಾತ್ರಿ ಕಳೆದ ವೇಳೆ ಮುಂಜಾನೆ 4 ಗಂಟೆಗೆ ಪಾದ ಗುಡಿಯ ಹತ್ತಿರ ಒಂದು ಕೋಣವನ್ನು ಕಡಿಯುತ್ತಾರೆ.

ಆಗ ಉತ್ಸವಾಂಭದೇವಿ ಕೆಳಗೆ ಬಂದಿರುವಳು. ಮೊದಲೇ ದೇವಿಯು ಬೆಟ್ಟದ ಮೇಲಿನಿಂದ ಕೆಳಗೆ ಬರುವಾಗ, ಅರಮನೆಯ ಹತ್ತಿರ, ಸಿಬಾರ ಕಂಬದ ಹತ್ತಿರ, ತುರುಬಿನ ಕಲ್ಲು ಬಸಪ್ಪನ ಬಳಿ ಚಾಡಮ್ಮನ ಬಾಗಿಲ ಹತ್ತಿರ, ಹರಿಹರದ ಬಾಗಿಲನ ಗುಡಿಯ ಬಳಿಯಲ್ಲಿ ತಲಾ ಒಂದೊಂದು ಕೋಣವನ್ನು ಕಡಿಯುತ್ತಾರಂತೆ. 'ಏಕೆಂದರೆ ಉಚ್ಚಂಗೆಮ್ಮ ಬೆಟ್ಟದ ಮೇಲಿನಿಂದ ಕೆಳಗೆ ರಕ್ತದಲ್ಲಿಯೇ ಬರಬೇಕಂತೆ. ಇವು ಸ್ಥಳೀಯರ ಅಭಿಪ್ರಾಯವಾಗಿವೆ.

ಕೋಣವನ್ನು ಯಾರು ಕಡಿಯುತ್ತಾರೆ ಎನ್ನುವುದಕ್ಕೆ ಪ್ರಸ್ತುತ ಪ್ರಬಂಧದ ಉಚ್ಚಂಗೆಮ್ಮ ಮತ್ತು ಜನಪದರ ಸಂಬಧಾತ್ಮಕತೆಯಲ್ಲಿ ಚರ್ಚಿಸಲಾಗಿದೆ. ಕೋಣವನ್ನು ಉಚ್ಚಂಗೆಮ್ಮನಿಗೆ 'ಏಕೆ ಬಲಿ ಕೊಡಬೇಕೆಂಬ ವಿಷಯಕ್ಕೆ ; ಅಲ್ಲಿಯ ಅನೇಕರು ಈ ಅಭಿಪ್ರಾಯ ಪಡುತ್ತಾರೆ. "ಉಚ್ಚಂಗೆಮ್ಮ ಹರಿಜನ ವ್ಯಕ್ತಿಯನ್ನು ಗಂಡನನ್ನಾಗಿ ಹೊಂದಿದ್ದಳಂತೆ. ಉಚ್ಚಂಗೆಮ್ಮನ ತಂದೆ ಸಂಪ್ರದಾಯವಾದಿಯಾಗಿದ್ದನೆಂದು, ಉಚ್ಚಂಗೆಮ್ಮ ಗಂಡನ ವಿರೋಧಿಯಾದನೆಂದು ಊರಿನಲ್ಲೊಂದು ದಿನ ಬರಗಾಲ ಕಾಣಿಸಿಕೊಂಡಿತಂತೆ ತನ್ನ ಮಗಳ ಗಂಡನನ್ನು ಬಲಿಯಾಗಿಸಿದರೆ ಬರಗಾಲ ಪರಿಹಾರವಾಗುವದೆಂದು ಊರಿನ ಜನಕ್ಕೆ ಉಚ್ಚಂಗೆಮ್ಮನ ತಂದೆ ಪರೋಕ್ಷವಾಗಿ ಅರುಹಿದನಂತೆ. ಇದರಿಂದ ಊರಿನವರ ಒತ್ತಾಯದ ಮೇರೆಗೆ ಅವನನ್ನು ಬಲಿಕೊಡಲಾಯಿತಂತೆ. ಅಂದಿನಿಂದ ಪ್ರತಿ ವರ್ಷ ಸಾಂಕೇತಿಕ ಕೋಣವನ್ನು ಬಲಿ ಕೊಡುವ ಪದ್ಧತಿ ಬಂದಿದೆ".

ಇನ್ನುಳಿದ ಕೋಣಗಳನ್ನು ಸ್ಥಳೀಯರೆ ಅಲ್ಲಿಯೇ ಹೊಂದಿಸಿಕೊಳ್ಳಬೇಕೆಂದುಕೊಳ್ಳುತ್ತಾರಂತೆ. ಈ ಕಡಿದ ಕೋಣಗಳಿಂದ ಆಗಲೇ ಹುಲುಸು[14] ತಯಾರಿಸುತ್ತಾರೆ. ಈ ಹುಲುಸನ್ನು ಊರಿನ ಸುತ್ತಲೂ ಮುಂಜಾವದಲ್ಲಿಯೇ ಉಗ್ಗುವರು ಈ ಕಾರ್ಯದಲ್ಲಿ ಬಹುತೇಕ ಊರಿನೆಲ್ಲಾ ಜನ ಭಾಗವಹಿಸುವರು. ಇದರಿಂದ ಊರಿನ ಸಮೃದ್ಧಿ ಹೆಚ್ಚುತ್ತದೆ ಎಂಬ ನಂಬಿಕೆ ಬೆಳೆದುಬಂದಿದೆ. ಇದನ್ನು ಬೇರೆ ಊರಿಗೆ ಬಿಟ್ಟು ಕೊಡುವುದಿಲ್ಲ. ಕಾರಣ ತಮ್ಮ ಊರಿನ ಶ್ರೇಯಸ್ಸು ಅವರಿಗೆ ಹೋಗಿಬಿಡುತ್ತದೆಂಬ ಭಯ ಅವರಿಗಿದೆ. ಈ ಹುಲುಸನ್ನು ಚೆಲ್ಲುವಾಗ ದಾರಿಯಲ್ಲಿ ಯಾರು ಎದುರು ಭಾಗದಲ್ಲಿ ಬರಬಾರದೆಂಬ ಕಟ್ಟಳೆ ಇದೆ. ಹಾಗಿದ್ದೂ ಯಾರಾದರೂ ಬಂದರೆ ಅವರ ಕಿವಿಯ ಅಥವಾ ದೇಹದ ಯಾವುದೇ ಭಾಗವನ್ನು ರಕ್ತಮಯ ಮಾಡಬೇಕಂತೆ. ಪ್ರಾಣಿಗಳು ಬಂದರೆ ಅಲ್ಲೇ ಬಲಿ ತೆಗೆದುಕೊಂಡು ಬಿಡುತ್ತಾರೆ. ಹೀಗೆ ಹುಲುಸಿನ ಕ್ರಿಯೆ ಜರುಗುತ್ತದೆ.

ಕಡಿದಿರುವ ಕೋಣದ ತಲೆಯ ಮೇಲೆ ಸುಮಾರು 2 ದಿನ ದೀಪವನ್ನು ಹಾಕುತ್ತಾರೆ. ನಂತರ ಆ ತಲೆಯನ್ನು ಉಚ್ಚಂಗಿದುರ್ಗದ ಪಾದ ಗುಡಿಯ ಮುಂಭಾಗದಲ್ಲಿ ನೆಲದಲ್ಲಿ ಹೂಳುತ್ತಾರಂತೆ. ಇದೆಲ್ಲಾ ಬುಧವಾರದ ಕ್ರಿಯೆಯಾದರೆ ಗುರುವಾರ ಉಟಗಿ ಉಡುವ[15] ಕಾರ್ಯ ಇತ್ಯಾದಿ ಕಾರ್ಯಗಳು ಜರುಗುವವು. ಇನ್ನು ಶುಕ್ರವಾರ ಹಬ್ಬದ ಅಂತ್ಯ ದಿನ ವಾಗುತ್ತಿದ್ದು ಆ ದಿನವು 12 ರಿಂದ 1 ಗಂಟೆಯ ಅವಧಿಯಲ್ಲಿ ಒಂದು ಕೋಣವನ್ನು ಬಲಿ ಕೊಡುತ್ತಾರಂತೆ.

ಹಬ್ಬದಲ್ಲಿ ಕೇಲು[16] ತರುವ ಪದ್ಧತಿ ಇದೆಯಂತೆ. ಇದರಲ್ಲಿ ವಿವಿಧ ಭೇದಗಳಿವೆ. ಬಡಿಗೇರ, ಮಡಿವಾಳರ, ಶ್ಯಾನಭೋಗರ, ಗೌಡರ ಮತ್ತು ಉಪ್ಪಾರರ ತಲಾ ಒಂದೊಂದು ಕೇಲುಗಳು ಭೈರಪ್ಪನ ಗುಡಿಯ[17] ಮುಂದೆ ತರಲ್ಪಡುತ್ತವೆ. ಅಲ್ಲಿ ಕೇಲುಗಳಿಗೆ ಸುರಗಿ ಸುತ್ತಿ ಕಳಸವನ್ನು ಬೆಳಗಿದ ನಂತರ ಸ್ವಸ್ಥಾನಗಳಿಗೆ ಮರಳುತ್ತವೆ. ಈ ಹಬ್ಬದ ಸಂದರ್ಭ ಜರುಗುವಾಗ ಮನೋರಂಜನೆ, ಕಾರ್ಯ ಕ್ರಮಗಳಾದ ನಾಟಕ, ಕುಸ್ತಿ ಸ್ಪರ್ಧೆ ಜಾಡಿಕೆಯವರ ಹಾಡುಗಾರಿಕೆ, ಪ್ರತಿ ರಾತ್ರಿಯೂ ನಡೆಯಲ್ಪಡುವವು. ಈ ಹಬ್ಬದಲ್ಲಿ ಸಿಹಿ ಪದಾರ್ಥವನ್ನು ಸೇವಿಸುತ್ತಾರೆ. ಕೆಳಜಾತಿಯವರು ಇದರೊಂದಿಗೆ ಮಾಂಸವನ್ನು ಸೇವಿಸುತ್ತಾರೆ. ಈ ಹಬ್ಬದಲ್ಲಿ ಕುರಿಗಳು, ಮೇಕೆಗಳು, ಕೋಳಿಗಳು ಲೆಕ್ಕವಿಲ್ಲದಷ್ಟು ಬಲಿಯಾಗುತ್ತವೆ. ಯುಗಾದಿ ಹಬ್ಬದಂತೆ ಕುರುಬರು ಈ ಹಬ್ಬಕ್ಕೆ ಕುರಿಗಳನ್ನು ಒದಗಿಸುತ್ತಾರೆ.

ಈ ಹಿರೇ ಹಬ್ಬಕ್ಕೂ ಕೆಲವು ವಿಧಿವಿಧಾನಗಳಿವೆ. ಹಬ್ಬ ಪ್ರಾರಂಭವಾಗುವ ಕೆಲವು ದಿನಗಳ ಮೊದಲೆ ಊರಿನ ಸುತ್ತಾ ಒಂದು ರೇಖೆ ಎಳೆಯಲಾಗುತ್ತದೆ. ಅದನ್ನು ದಾಟಿ ಹಬ್ಬ ಮುಗಿಯುವವರೆಗೆ ಯಾರೂ ಹೊರಗೆ ಹೋಗಬಾರದೆಂಬುದ ನಿಯಮವು ವಾಗಿದೆ. ಈ ಗಡಿಯ ರಕ್ಷಣೆ ಹರಿಜನರಿಗೆ ಸಂಬಂಧಿಸಿದ್ದಾಗಿರಬಹುದಾಗಿದೆ. ಇತ್ಯಾದಿ ವಿಧಿ ವಿಧಾನಗಳನ್ನೊಳಗೊಂಡ ಈ ಹಿರೇ ಹಬ್ಬಕ್ಕೆ ತುಂಬಾ ಮಹತ್ವವನ್ನು ಸ್ಥಳೀಯರು ಕಲ್ಪಿಸಿಕೊಂಡಿರುತ್ತಾರೆ. ಈ ಹಿರೇಹಬ್ಬದ ಆಚರಣೆಯಲ್ಲಿ ವ್ಯಾಪಕವಾದ ಬಲಿಯಾಗುವುದನ್ನು ಇಲ್ಲಿ ಗ್ರಹಿಸಲಾಗಿದೆ. ಮತ್ತು ಇತ್ತೀಚಿನ ದಿನಗಳಲ್ಲಿ ಬಹುತೇಕ ಬಲಿಯ ಪ್ರಮಾಣ ಕಡಿಮೆಯಾಗುತ್ತಿದೆ. ಇದಕ್ಕೆ ಸರಕಾರದ ಕಾನೂನಿನ ಭಯವಿದ್ದಿರಬಹುದು ಅಥವಾ ಮಾನವನ ಬದಲಾವಣೆ ಹೊಂದುತ್ತಿರುವ ಲಕ್ಷಣವೂ ಆಗಿರಬಹುದು. ಈ ಹಿರೇ ಹಬ್ಬದಲ್ಲಿ ಬರುವ ಬಹುತೇಕ ಆಚರಣೆಗಳನ್ನು ಅನೇಕ ಗ್ರಾಮಗಳ ಗ್ರಾಮದೇವತೆಯ

—ಹಬ್ಬದಲ್ಲಿಯೂ ಗಮನಿಸಬಹುದಾಗಿದೆ. ಉಚ್ಚಂಗಿ ದೇವಿಯ ಹೆಸರಲ್ಲಿ ನಡೆಯುವ ಈ ಹಿರೇ ಹಬ್ಬವು ಇಂದಿಗೆ ಹನ್ನೊಂದು ವರ್ಷಗಳ ಹಿಂದೆ ನಡೆದಿತ್ತಂತೆ. ಹಾಗಾಗಿ ಈಗ ನಡೆಯುವ ಹಬ್ಬವು ಕೆಲವು ಮಾರ್ಪಾಡುಗಳನ್ನು ಹೊಂದಲವಕಾಶವಿದೆ.

## ಉಚ್ಚಂಗಿ ದುರ್ಗದಲ್ಲಿ ನಡೆಯುವ ಇತರೆ ಹಬ್ಬ-ಹರಿದಿನಗಳು:

ಯುಗಾದಿಯ ಹಬ್ಬದ ನಂತರ ದಸರಾ ಉತ್ಸವಕ್ಕೂ ಅಷ್ಟೇ ಮಹತ್ವ ನೀಡಲಾಗುತ್ತದೆ. ನಮ್ಮ ನಾಡಿನದ್ಯಾಂತ ವಿವಿಧ ರೀತಿಯಲ್ಲಿ ಆಚರಿಸಲ್ಪಡುವ ಈ ಹಬ್ಬವನ್ನು ಉಚ್ಚಂಗಿದುರ್ಗದಲ್ಲಿಯೂ ವಿಶೇಷ ಮಹತ್ವದಿಂದ ಆಚರಿಸುತ್ತಾರೆ. ನವರಾತ್ರಿಯ ದಿನಗಳಲ್ಲಿ ಈ ಉತ್ಸವವೂ ಪ್ರಾರಂಭವಾಗುತ್ತಿದ್ದು, ಹಬ್ಬದ ಪಾಡ್ಯದ ದಿನ ದೇವಿಯನ್ನು ಪಟ್ಟಕ್ಕೆ ಕುಳ್ಳಿರಿಸುತ್ತಾರೆ. ಪಟ್ಟಕ್ಕೆ ಕುಳ್ಳಿರಿಸುವದೆಂದರೆ, ''ಉಚ್ಚಂಗಿದುರ್ಗದ ಬೆಟ್ಟದ ಮೇಲಿರುವ ಉಚ್ಚಂಗೆಮ್ಮ ದೇವಾಲಯದ ಗರ್ಭಗೃಹದ ಎಡ ಪಾರ್ಶ್ವದಲ್ಲಿ ಬಣ್ಣದ ಹಾಳೆ ಮತ್ತು ಸೀರೆಗಳಿಂದ ಅಲಂಕರಿಸಿದ ಮಂಟಪದಲ್ಲಿ ಕುದುರೆಯ ಮೇಲೆ ದೇವಿಯ ಉತ್ಸವ ಮೂರ್ತಿಯನ್ನು ಕೂಡಿಸುವದಾಗಿದೆ. ಆಗ ಉಚ್ಚಂಗೆಮ್ಮನಿಗೆ ಪ್ರತಿವರ್ಷ ಸಂಪ್ರದಾಯದಂತೆ ಶ್ಯಾನಭೋಗರು ಹೊಸ ಸೀರೆಯನ್ನು ತರುತ್ತಾರೆ. ಅದನ್ನೇ ಆ ದಿನ ತೊಡಿಸಲಾಗುವುದು. ಅಲ್ಲಿಂದ ದಶಮಿಯ ದಿನದಂದು ಮಹತ್ವದ್ದು ಆ ದಿನ ಉಚ್ಚಂಗೆಮ್ಮನಿಗೆ ಬನ್ನಿ ಮುಡಿಯುತ್ತಾರೆ. ಇಲ್ಲಿ ಬನ್ನಿ ಮುಡಿಯುವ ಹಬ್ಬವು ವಿಶಿಷ್ಟ ರೀತಿಯಲ್ಲಿ ಆಚರಿಸಲ್ಪಡುತ್ತದೆ. ಬನ್ನಿ ಮುಡಿಯುವ ದಿನ ಸಂಜೆ ಉಚ್ಚಂಗೆಮ್ಮನ ಉತ್ಸವ ಮೂರ್ತಿಯನ್ನು ಬೆಟ್ಟದಿಂದ ಕೆಳಗೆ ಹೊನ್ನಹೊಂಡದ ಎದುರು ಭಾಗದಲ್ಲಿರುವ ಚೌತ ಮನೆಯ ಬನ್ನಿಮರಕ್ಕೆ ತರುತ್ತಾರೆ. ಆಗ ಬಿಲ್ಲನ್ನು ಹೆದೆ ಏರಿಸಿ ಹೊಡೆಯುವ ಪದ್ಧತಿ ಇದೆ. ಈ ಬಿಲ್ಲನ್ನು ಸಾಮಾನ್ಯವಾಗಿ ಲಿಂಗಾಯತ ಜನಾಂಗದವರಲ್ಲೊಬ್ಬ ಹೊಡೆಯಬೇಕು. ಇವನು ಮದುವೆಯಾದವನಾಗಿರಬೇಕು ಮತ್ತು ಆ ದಿನ ಉಪವಾಸ ಮಾಡಬೇಕಾಗುತ್ತದೆ. ಒಟ್ಟು ಮೂರು ಬಾಣಗಳಲ್ಲಿ ಒಂದು ಬನ್ನಿ ಮರಕ್ಕೆ ಇನ್ನೆರಡು ಬಾಣಗಳನ್ನು ಆಕಾಶದ ಕಡೆ ಹೊಡೆಯಬೇಕು. ಬಾಣಗಳು ತುಂಬಾ ಮೇಲಕ್ಕೆ ಹೋದಷ್ಟು ಮಳೆ ಬೆಳೆಗಳು ಚೆನ್ನಾಗಿ ಆಗುತ್ತವೆ ಎಂಬ ನಂಬಿಕೆ ಇದೆ. ಮರಕ್ಕೆ ಮತ್ತು ಮೇಲಕ್ಕೆ ಹೊಡೆದ ಬಾಣಗಳು ಯಾರಿಗೆ ಸಿಗಲ ಅವರು ಮರಳಿ ದೇವಸ್ಥಾನಕ್ಕೆ ತಂದು ಕೊಡುತ್ತಾರೆ. ಈ

ಬಾಣಗಳನ್ನು ಬಡಗಿ ಜನಾಂಗದವರು ಹೊನ್ನೆ ಕಟ್ಟಿಯಿಂದ ಮಾಡಿ ಅದಕ್ಕೆ ತಾಮ್ರದ ಕಟ್ಟುಗಳನ್ನು ಹಾಕಿರುತ್ತಾರೆ. ಈ ಎಲ್ಲಾ ನಿಯಮಗಳೊಳಗೊಂಡ ಶಕ್ತಿ ಉಚ್ಚಂಗೆಮ್ಮನ ದೇವತೆಗಳು ಮಾರನೆಯ ದಿನ ಬನ್ನಿ ಮುಡಿಯಬೇಕೆಂಬ ನಿಯಮ ಉಂಟು. ಉದಾಹರಣೆಗೆ ಹರಿಜನಕೇರಿ ದುರುಗಮ್ಮ ತನ್ನ ಜನ ಸಮೂಹದೊಂದಿಗೆ ಹತ್ತಿರ ಆಗ್ನೇಯ ಭಾಗದ ಬನ್ನಿ ಮರಕ್ಕೆ ಬನ್ನಿ ಮುಡಿಯಲು ಹೋಗುವ ಪದ್ಧತಿ ಇದೇ ಪದ್ಧತಿ ಊರಿನ ಇತರೆ ಉಪದೇವತೆಗಳಿಗೂ ಇರುವುದು ತಿಳಿದುಬರುತ್ತದೆ.

ಈ ಮೇಲಿನ ಆಚರಣೆಯಿಂದ ಉಚ್ಚಂಗೆಮ್ಮ ಈ ಭಾಗದವರಿಗೆ ಪ್ರಮುಖ ದೇವತೆ ಯಾಗಿದ್ದಾಳೆಂದು ಗ್ರಹಿಸಲಾಗುವುದು.

ಹುಣ್ಣಿಮೆಗಳು :

ವಿಶೇಷವಾಗಿ ಸ್ತ್ರೀ ದೇವತೆಗಳ ಆಚರಣೆಗಳು ಹುಣ್ಣಿಮೆ ದಿನಗಳಲ್ಲಿ ನಡೆಯುವುದನ್ನು ಗಮನಿಸಿರುತ್ತೇವೆ. ಉಚ್ಚಂಗಿ ದೇವಿಯ ದರ್ಶನಕ್ಕಾಗಿ ಸಾವಿರಾರು ಜನಗಳು ಹುಣ್ಣಿಮೆ ದಿನಗಳಲ್ಲಿ ಬಂದು ಹೋಗುತ್ತಾರೆ. ಆಗ ಒಂದು ಸಣ್ಣ ಜಾತ್ರೆಯಂತೆಯೇ ಉಚ್ಚಂಗೆಮ್ಮನ ಕ್ಷೇತ್ರದಲ್ಲಿ ಆಚರಿಸಲ್ಪಡುತ್ತದೆ. ಪ್ರತಿ ಹುಣ್ಣಿಮೆಯಲ್ಲಿ ದೇವಿಯನ್ನು ಹಿಂದಿನ ದಿನವೇ ರಾತ್ರಿ ಆನೆಹೊಂಡದ ಬಳಿ ಕರೆತರುತ್ತಾರೆ. ಆನೆ ಹೊಂಡದ ಕಟ್ಟೆಯ ಮೇಲೆ ಕುಳ್ಳಿರಿಸಿ ಸ್ನಾನದ ನಂತರ ಅಲಂಕರಿಸಿ ಪೂಜೆ ಮಾಡುತ್ತಾರೆ. ನಂತರ ವಾದನಗಳೊಂದಿಗೆ ಸ್ವಸ್ಥಾನಕ್ಕೆ ತರುತ್ತಾರೆ. ಶ್ರಾವಣ ಮಾಸದ ನೂಲಹುಣ್ಣಿಮೆ, ಭಾರತ ಹುಣ್ಣಿಮೆ, ಕಾರ್ತಿಕ ಹುಣ್ಣಿಮೆ ಇಲ್ಲಿ ಬಹಳ ಮಹತ್ವದ್ದವುಗಳು.

ನೂಲ ಹುಣ್ಣಿಮೆ :



ಹೆಸರೇ ಸೂಚಿಸುವಂತೆ 'ನೂಲು' ಅಂದರೆ ದಾರ ಇದನ್ನೆ ಕಟ್ಟಿಕೊಳ್ಳುವುದೇ ಇದರ ವಿಶೇಷ. ಉಚ್ಚಂಗೆಮ್ಮ ದುರ್ಗದಲ್ಲಿಯ ಜನತೆ ಉಚ್ಚಂಗೆಮ್ಮನ ಹೆಸುನಲ್ಲಿ ಹೊಸ ನೂಲನ್ನು ಧರಿಸುತ್ತಾರೆ. ಈ ದಾರವನ್ನು ಮೊದಲೆ ಹತ್ತಿರದ ಪಟ್ಟಣಗಳಿಂದ ತಂದಿರಿಸಿ ಕೊಂಡಿರುತ್ತಾರೆ. ಇದಕ್ಕೆ ಶಿವದಾರವೆಂತಲೂ ಕೆಲವರು ಕರೆಯುತ್ತಾರೆ. ಮುತ್ತು ಕಟ್ಟಿಸಿಕೊಂಡ ಕನ್ನೆಯರು, ಗರತಿಯರು, ಗಂಡಸರು ಮತ್ತು ಜೋಗತಿಯರು ಮುತ್ತುಗಳಿಗೆ ಹೊಸದಾರವನ್ನು ಹಾಕಿಕೊಳ್ಳುತ್ತಾರೆ. ಲಿಂಗಾಯುತರು ತಮ್ಮ

ಲಿಂಗದ ಕಾಯಿಗಳಿಗೆ ಹೊಸ ಶಿವದಾರ ಹಾಕಿಕೊಂಡರೆ, ಬ್ರಾಹ್ಮಣರು ಜನಿವಾರವನ್ನು, ಮಕ್ಕಳಿಗೆ ಉಡಿದಾರಗಳನ್ನು ಬದಲಿಸುತ್ತಾರೆ. ಹೀಗೆ ನೂಲ ಹುಣ್ಣಿಮೆ ಪ್ರಮುಖ ಹುಣ್ಣಿಮೆಗಳಲ್ಲಿ ಒಂದಾಗಿದೆ.

<u>ಭಾರತ ಹುಣ್ಣಿಮೆ :</u>

ಸ್ಥಳೀಯರಾನೇಕರು ಇದನ್ನು ರಂಡಿ ಹುಣ್ಣಿಮೆಯೆಂತಲೂ ಅಭಿಪ್ರಾಯ ಪಡುತ್ತಾರೆ. ಈ ಹುಣ್ಣಿಮೆಯು ಉಚ್ಚಂಗಿದುರ್ಗದಲ್ಲಿ ವಿಶೇಷವಾಗಿ ಆಚರಿಸಲ್ಪಡುತ್ತದೆ. ಬಹುಶ: ಕನ್ಯೆ ಮತ್ತು ಮುತ್ತು ಕಟ್ಟಿಸಿಕೊಂಡವರು ಮತ್ತು ಜೋಗತಿ ಜೋಗಪ್ಪಗಳು ಬರಲೇಬೇಕು ಎಂಬ ನಿಯಮವಿದ್ದಂತೆ ತಿಳಿದುಬರುತ್ತದೆ. ಉಚ್ಚಂಗಿ ದೇವಿ ಗಂಡನನ್ನು ಕಳೆದುಕೊಂಡು ರಂಡಿಯಾದ ದಿನಗಳಿಂದು ಹಾಗಾಗಿ ರಂಡಿ ಹುಣ್ಣಿಮೆ ಎಂದು ಕರೆಯುತ್ತಾರೆಂದು ಅಲ್ಲಿಯವರ ಅಭಿಪ್ರಾಯವಾಗಿದೆ. ಬಹುಶ: ಸ್ತ್ರೀ ದೇವತೆಗಳಿಗೆಲ್ಲ ರಂಡಿ ಹುಣ್ಣಿಮೆ ಮಹತ್ವದ್ದಾಗಿರಬೇಕು.

<u>ಕಾರ್ತಿಕದ ಹುಣ್ಣಿಮೆ :</u>

ಈ ಹುಣ್ಣಿಮೆಯಲ್ಲಿ ಮುತ್ತು ಕಟ್ಟಿಸಿಕೊಂಡವರು, ಕಡ್ಡಾಯವಾಗಿ ಸೇರಲೇಬೇಕೆಂಬ ನಿಯಮವಿದೆ. ಇವರಲ್ಲಿ ಜೋಗಪ್ಪಗಳು ಮತ್ತು ಜೋಗತಿಗಳೂ ಸೇರುತ್ತಾರೆ. ಈ ಸಮಯದಲ್ಲಿ ಸುಖ ದು:ಖಗಳ ವಿನಿಮಯಿಸುವ ಕಾರ್ಯ ನಡೆಯುತ್ತ ಒಟ್ಟಾಗಿ ಸೇರಿ ಊಟ ಉಪಚಾರಗಳನ್ನು ಮಾಡಿಕೊಳ್ಳುತ್ತಾರೆ. ಉಚ್ಚಂಗೆಮ್ಮನ ದೇವಾಲಯ ದೀಪಗಳಿಂದ ಅಲಂಕರಿಸಲ್ಪಟ್ಟಿರುತ್ತದೆ. ಊರಿನಲ್ಲಿ ಎಲ್ಲಾರೂ ಸೇರುವ ಪದ್ಧತಿ ನಡೆದು ಬಂದಿದೆ.

ಹೀಗೆ ಉಚ್ಚಂಗಿ ದುರ್ಗದ ಈ ಹುಣ್ಣಿಮೆಗಳು ಆಚರಣೆಯಲ್ಲಿ ಮುತ್ತು ಕಟ್ಟಿಸಿ ಕೊಂಡವರ ಪಾತ್ರವನ್ನು ಗ್ರಹಿಸಬಹುದಾಗಿದೆ. ಪ್ರತಿ ಅಮಾವಾಸೆ ಮತ್ತು ಮಂಗಳವಾರ ಹಾಗೂ ಶುಕ್ರವಾರಗಳೂ ಈ ದೇವತೆಗೆ ವಿಷೇಶ ಪೂಜೆ ನಡೆಯುತ್ತಿರುವುದು ವಿಶೇಷವಲ್ಲ. ಎಲ್ಲಾ ಸ್ತ್ರೀ ದೇವತೆಗಳಲ್ಲಿ ಈ ವಾರಗಳಂದು ಪೂಜಿಸಲ್ಪಡುತ್ತವೆ.

## ಜಾತ್ರೆ :

ಪ್ರತಿ ವರ್ಷಕ್ಕೊಮ್ಮೆ ಜನರು ಯುಗಾದಿಯಲ್ಲಿ ಉಚ್ಚಂಗಿ ದುರ್ಗಕ್ಕೆ ಜಾತ್ರೆ ಮಾಡಲು ಬರುತ್ತಾರೆ. ಉಚ್ಚಂಗಿಯಮ್ಮನ ಹೆಸರಿನಲ್ಲಿ ಈ ಜಾತ್ರೆ ನಡೆಯಲ್ಪಡುವುದು. ಸುತ್ತ 3 ಕಿ.ಮೀ. ದೂರದವರೆಗೆ ಇದು ವ್ಯಾಪಿಸಿರುತ್ತದೆ. ಇಲ್ಲಿಗೆ ತುಂಬಾ ದೂರದಿಂದ ಯುಗಾದಿ ಹಬ್ಬಕ್ಕಾಗಿ ಬಂದ ಜನರು ಜಾತ್ರೆ ಮಾಡಿಕೊಂಡು ಹೋಗುತ್ತಾರೆ. ಎಲ್ಲ ಜಾತ್ರೆಗಳಂತೆ ಇದೊಂದು ಜಾತ್ರೆ. ಬಹುಶಃ ಅಂಥ ವಿಶೇಷವೆಂದೇನೂ ಕಾಣಬರುವುದಿಲ್ಲ. ಸುಮಾರು 8 ದಿನಗಳ ಕಾಲ ಯುಗಾದಿಯಲ್ಲಿ ಆಚರಿಸಲ್ಪಟ್ಟರೆ ಇದೇ ಮೇಲಿನ ಜಾತ್ರೆ ಸ್ವರೂಕ್ಕಿಂತ ಸ್ವಲ್ಪ ದೊಡ್ಡದಾದ ಹಿರೇ ಹಬ್ಬದಲ್ಲಿಯೂ ಸುಮಾರು 8 ದಿನಗಳ ಕಾಲ ಜಾತ್ರೆ ಇರುತ್ತದೆ. ಸುತ್ತಳ್ಳಿಗಳಿಂದ ಸಾವಿರಾರು ಸಂಖ್ಯೆಯಲ್ಲಿ ಜನ ಬಂದು ಸೇರುತ್ತಾರೆ. ಮತ್ತು, ದಾವಣಗೇರಿ, ಹರಪನಹಳ್ಳಿ ಜನಕುಬಂದು, ಈ ಭಾಗದ ಅಂಗಡಿಗಳೇ ಹೆಚ್ಚಾಗಿರುತ್ತವೆ. ಜಾತ್ರೆಗಳಿಗಿಂತ ಹಬ್ಬಕ್ಕೆ ಹೆಚ್ಚು ಮಹತ್ವ ನೀಡಲಾಗಿದೆ.

## ಹಬ್ಬ-ಹರಿದಿನಗಳಲ್ಲಿ ಬಳಸುವ ವಾದನಗಳು :

ಮನೋರಂಜನೆಯ ಸಾಧನಗಳಿಂದ ವಾದನಗಳಿಂದ ಜನರನ್ನು ಸೇರಿಸುವ ಮತ್ತು ಹಬ್ಬಕ್ಕೆ ಇತ್ಯಾದಿ ಕಾರ್ಯಗಳಿಗೆ ಲಕ್ಷಣ ಬರುವದಕ್ಕೆ ವಾದನಗಳ ವಾದನವೂ ಅವಶ್ಯಕವಾಗಿರುವುವು. ಉಚ್ಚಂಗಿ ದುರ್ಗದಲ್ಲಿ ಬಳಸುವ ವಾದನಗಳು ಹೀಗಿವೆ.

**ಡೊಳ್ಳು :** ಡೊಳ್ಳು ಈ ಹೆಸರೇ ಇದರ ಪರಿಚಯ ಮಾಡಿಕೊಡುತ್ತದೆ. ದೊಡ್ಡ ಗಾತ್ರಕೆಯನ್ನು ಹೊಂದಿ, ಮಧ್ಯದಲ್ಲಿ ಟೊಳ್ಳಾಗಿದ್ದು ಸುತ್ತಲೂ ಕಟ್ಟಿಗೆಯನ್ನು ಹೊಂದಿ ಮುಚ್ಚಳಿಕೆಗೆ ಎರಡೂ ಬದಿಯಲ್ಲಿ ಚರ್ಮವನ್ನು ಬಗಿದಿರುತ್ತಾರೆ. ಕುರುಬರು ಹೆಚ್ಚಾಗಿ ಇದರ ವಾದನ ಮಾಡುತ್ತಾರೆ. ಇದರಲ್ಲಿ ಸ್ಪರ್ಧೆಗಳನ್ನು ಮಾಡುತ್ತಾರೆ. ಜಲ್ಲರೆಯ ಉಪಯೋಗವನ್ನು ಮಾಡುತ್ತಾರೆ. ಹಿರೇಹಬ್ಬ, ಯುಗಾದಿಯಲ್ಲಿ ಈ ವಾದನದ ವಿಶೇಷತೆ ಇರುತ್ತದೆ. ಬಹುತೇಕ ಕುರುಬರೇ ತಯಾರಿಸುತ್ತಾರೆ.

**ಸಮಳ :** ಸಮಳಕ್ಕೆ ಕೊಡಪಾನಾಕಾರದ ಮಣ್ಣಿನ ಕುಂಭ ಅಥವಾ ಸ್ಟೀಲಿನ ಕೊಡ ಕಂಠ ತುಂಬಾ ಅಗಲವಾಗಿದ್ದು ಅದರ ಮೇಲ್ಭಾಗಕ್ಕೆ ಚರ್ಮ ಹಾಕಿ ಬಗಿದಿರುತ್ತಾರೆ.

ಇವನ್ನು ಬಾರಿಸಲು ತೆಳ್ಳನೆಯ ಎರಡು ಕಟ್ಟಿಗೆಯ ಕೋಲುಗಳು ಇರುತ್ತವೆ. ಸಾಮಾನ್ಯವಾಗಿ ಲಿಂಗಾಯತರು ಇವುಗಳ ವಾದನ ಮಾಡುತ್ತಾರೆ. ತುಂಬಾ ಕಡೆ ವೀರಭದ್ರ ದೇವರ ಹಬ್ಬಗಳಲ್ಲಿ ಈ ವಾದ್ಯವನ್ನು ಉಪಯೋಗಿಸುವುದು ಹೆಚ್ಚು.

ಹಲಗೆ :

ಇದನ್ನು ದುಂಡಾಕಾರವಾದ ಕಬ್ಬಿಣದ ಅಗಲವಾದ ಬಳೆಗೆ ದನಗಳ ಚರ್ಮ ವನ್ನು ಹದಮಾಡಿ ಸುತ್ತಿ ಬಿಗಿದಿರುತ್ತಾರೆ. ತುಂಬಾ ಶಬ್ದ ಮಾಡುವ ಈ ವಾದ್ಯವು ಹರಿಜನರು ಬಾರಿಸುತ್ತಾರೆ ಮತ್ತು ಅವರೇ ತಯಾರು ಮಾಡುತ್ತಾರೆ.

ಚೌಡಿಕೆ :

ಡಬ್ಬಿಯಾಕಾರದ ಕಟ್ಟಿಗೆಯ ಚೌಕಟ್ಟಿನ ಮಧ್ಯ ಭಾಗದಲ್ಲಿ ರಂಧ್ರ ವನ್ನು ಮಾಡಿ ಅಲ್ಲಿಂದ ದಾರದ ಎಳೆಯನ್ನು ಡಬ್ಬಿಯ ಮುಂಭಾಗದ ಉದ್ದನೆಯ ಕಟ್ಟಿಗೆಗೆ ಕಟ್ಟಿರುತ್ತಾರೆ. ಇದಕ್ಕೆ ಚೌಡಿಕೆ ಎನ್ನುವರು. ಸಾಮಾನ್ಯವಾಗಿ ಜೋಗತಿ ಮತ್ತು ಜೋಗಪ್ಪಗಳು ಬಾರಿಸುತ್ತಾರೆ.

ನಗಾರಿ :

ಇದು ಸಮಳದ ರೂಪದಲ್ಲಿದ್ದು ಅದಕ್ಕಿಂತಲೂ ತುಂಬಾ ದೊಡ್ಡ ದಾಗಿರುತ್ತದೆ. ಉಚ್ಚಂಗೆಮ್ಮನ ದೇವಸ್ಥಾನದ ಎಡಭಾಗದಲ್ಲಿದೆ. ಅದನ್ನು ನಿತ್ಯ ಪೂಜೆ ಮಾಡುವಾಗ ಗೊತ್ತು ಮಾಡಲ್ಪಟ್ಟ ವ್ಯಕ್ತಿ ಬಾರಿಸುತ್ತಾನೆ. ಇದು ಪಾಳೇಗಾರರ ಕಾಲದ ನಗಾರಿ ಎಂದು ಸ್ಥಳೀಯರು ಅಭಿಪ್ರಾಯಪಡುತ್ತಾರೆ.

ಶಹನಾಯಿ :

ಕೊಳಲಿಗಿಂತ ದೊಡ್ಡದಾದ ಮತ್ತು ಭಿನ್ನವಾದ ವಾದನವಾಗಿದೆ. ಇದನ್ನು ಬಹುತೇಕ ಚಲುವಾದಿಗಳು ಹೊಂದಿರುತ್ತಾರೆ. ಇದರ ವಾದನವು ಅವರದೇ ಆಗಿದೆ.

ಕೋಲಾಟದ ಮೇಳ :

ಉಚ್ಚಂಗಿ ದುರ್ಗದಲ್ಲೊಂದು ಕೋಲು ಮೇಳವಿದೆ. ಎಲ್ಲ ಜಾತಿಯ ಜನರು ಈ ಮೇಳದಲ್ಲಿರುತ್ತದೆ. ಕೆಲವು ಕಡೆ ಅವರದೇ ಜನಾಂಗದ ಗುಂಪಿನ ಮೇಳಗಳು ಇರಬಹುದು. ಕೆಲವು ಬಾರಿ ಇದರಲ್ಲಿಯೂ ಸ್ಪರ್ಧೆಗಳು ನಡೆಯುತ್ತವೆ.

## ಉಚ್ಚಂಗಿದುರ್ಗ ಮತ್ತು ಜನಪದರ ಸಂಬಂಧಾತ್ಮಕತೆ :

ಉಚ್ಚಂಗಿದುರ್ಗದಲ್ಲಿರುವ ವಿವಿಧ ಜನಾಂಗಗಳಲ್ಲಿಯ ಸಂಬಂಧಾತ್ಮಕತೆ ಹಾಗೂ ಉಚ್ಚಂಗೆಮ್ಮ ದೇವಿಯೊಂದಿಗೆ ಉಚ್ಚಂಗಿ ದುರ್ಗದ ಜನರು ಮತ್ತು ಕುಲದೇವರಾಗಿ ಉಚ್ಚಂಗೆಮ್ಮನನ್ನು ಮಾಡಿಕೊಂಡವರು ಯಾವ ರೀತಿ ಸಂಬಂಧಗಳನ್ನು ಹೊಂದಿದ್ದಾರೆ ಎನ್ನುವುದನ್ನು ಚರ್ಚಿಸುವುದೇ ಈ ಭಾಗದ ಉದ್ದೇಶವಾಗಿದೆ.

ಮಾದಿಗರು : ಈ ಜನಾಂಗದವರು ಊರಿನಲ್ಲಿ ಪ್ರಮುಖ ಪಾತ್ರವಹಿಸುತ್ತಾರೆ. ಊರಿನಲ್ಲಿ ಯಾವುದೇ ಕಾರ್ಯ ನಡೆದರೂ ಸ್ವಚ್ಛತೆಯನ್ನು ಇವರೇ ಮಾಡಬೇಕಾಗುವುದು. ಊರಿನ ಮೇಲ್ಜಾತಿಯವರ ಕೆಲಸ ಕಾರ್ಯದಲ್ಲಿ ತೊಡಗಿರುವ ಇವರು ತಮ್ಮದೇ ಆದ ಒಂದು ಪ್ರದೇಶದಲ್ಲಿ ವಾಸಿಸಿದ್ದಾರೆ. ದೇವರ ಕಾರ್ಯದಲ್ಲಿ ಈ ಜನಾಂಗದ ಪಾತ್ರ ಪ್ರಮುಖವಾದಂತೆ ತೋರುತ್ತದೆ. ಉಚ್ಚಂಗೆಮ್ಮ ದೇವಸ್ಥಾನದ ಕಸ ತೆಗೆಯುವುದು, ನಗಾರಿ ಬಾರಿಸುವುದು ಹಾಗೂ ದೀಪ ಹಿಡಿಯುವುದು ಊರಿನಲ್ಲಿ ಯಾವುದೇ ಕಾರ್ಯ ಜರುಗಿದರೂ ಸಾಕು ಸಾರು ಹಾಕಿ ಸುದ್ದಿ ಮುಟ್ಟಿಸುವುದು. ಹಿರೆ ಹಬ್ಬದಲ್ಲಿ ಕೋಣಗಳನ್ನು ಅಂಕೆ ಹಾಕುವುದು. ಕೋಣದ ತಲೆಯ ಮೇಲೆ ಇರುವ ದೀಪವನ್ನು ಕಾಯುವುದು ಊರಿನ ರಕ್ಷಣೆಯ ಕಾರ್ಯದಲ್ಲಿ ಭಾಗವಹಿಸುವುದು. ಊರಿನಲ್ಲಿ ಯಾರಾದರೂ ಸತ್ತರೆ ಅವರ ಸಂಬಂಧಿಗಳಿಗೆ ಸುದ್ದಿ ಮುಟ್ಟಿಸುವುದು, ಸತ್ತವರ ಮೆರವಣಿಗೆಯಲ್ಲಿ ಹಲಗೆ ಬಾರಿಸುವುದು ಇತ್ಯಾದಿ ಪ್ರಮುಖ ಕಾರ್ಯಗಳನ್ನು ನಿರ್ವಹಿಸುತ್ತಾರೆ.

ಬಹುತೇಕ ಈ ಜಾತಿಯವರು ಉಚ್ಚಂಗೆಮ್ಮನಂತಹ ಸ್ತ್ರೀ ದೇವತೆಗಳನ್ನು ಹೆಚ್ಚಾಗಿ ಪೂಜಿಸುತ್ತಾರೆ ಮತ್ತು ಕುಲದೇವರಾಗಿ ಸ್ವೀಕರಿಸಿರುವುದು ಕಂಡುಬರುತ್ತದೆ. ಉಚ್ಚಂಗೆಮ್ಮ ಬಹುತೇಕ ಈ ಜನಾಂಗದವರಿಗೆ ಕುಲ ದೇವತೆಯಾಗಿದ್ದಾಳೆ. ''ಮುತ್ತು ಕಟ್ಟಿಸುವ ಪದ್ಧತಿ[18] ಇಂದಿಗೂ ಇವರಲ್ಲಿಯೇ ಹೆಚ್ಚಿನ ಪ್ರಮಾಣದಲ್ಲಿದೆ. ಬಾಹ್ಯ ಸಮಾಜಕ್ಕೆ ಇದು ಗೋಚರಿಸಲಾರದು''. ಈ ಮುತ್ತು ಕಟ್ಟಿಸುವ ಪದ್ಧತಿ ಉಚ್ಚಂಗೆಮ್ಮನ ಹೆಸರಿನಲ್ಲಿ ಈ ಭಾಗದಲ್ಲಿ ನಡೆಯುತ್ತಿರುವುದು ಕಂಡುಬರುತ್ತದೆ. ಸರಕಾರದ ಸೌಲಭ್ಯಗಳಲ್ಲಿ ಈ ಜನಾಂಗಕ್ಕೆ ಸಿಂಹ ಪಾಲಿದೆ. ಉಚ್ಚಂಗಿ ದುರ್ಗದಲ್ಲಿಯು ಹಲವು ರೂಪದಲ್ಲಿ ಅವರಿಗೆ ದೊರೆತಿದೆ.

ತಳವಾರರು :

ಊರಿನೆಲ್ಲಾ ತಳವಾರರು ಉಚ್ಚಂಗೆಮ್ಮನನ್ನು ಪೂಜಿಸುತ್ತಾರೆ. ಮತ್ತು ಬಹುತೇಕರು ಕುಲದೇವರಾಗಿಯೂ ಮಾಡಿಕೊಂಡಿದ್ದಾರೆ. ಇವರಿಗೆ ವಾಲ್ಮೀಕಿ ಕನಾಂಗದವರೆಂತಲೂ ಕರೆಯುತ್ತಾರೆ. ಇವರು ಪಾಳೇಗಾರರ ವಂಶಸ್ಥರೆಂತಲೂ ಪ್ರತೀತಿ ಇದೆ. ಕೋಟೆಯೊಳಗಿನ ದಕ್ಷಿಣಕ್ಕಿರುವ ಊರಿನಲ್ಲಿ ವಾಲ್ಮೀಕಿಯವರ ಮನೆಗಳೇ ಹೆಚ್ಚಿವೆ. ಇವರಿಗೆ ನಾಯಕರೆಂದೂ ಕರೆಯುವದರಿಂದ ಈ ಹೆಸರಿಂದಲೇ ಕೋಟೆಯೊಳಗಿನ ದಕ್ಷಿಣದ ಊರು ಕರೆಯಲ್ಪಟ್ಟಿದೆ. ಉಚ್ಚಂಗೆಮ್ಮನ ಉತ್ಸವಗಳಲ್ಲಿಯೂ ಇವರು ತುಂಬಾ ಮಹತ್ವದ ಕಾರ್ಯ ನಿರ್ವಹಿಸುತ್ತಾರೆ. ಹಿಂದಿನಿಂದಲೂ ಬೇಟೆಯಾಡುವುದು ಇವರಿಗೆ ಹೆಚ್ಚಾಗಿ ಹವ್ಯಾಸವಾಗಿರಬೇಕು. ಇತ್ತೀಚೆಗೆ ಕಡಿಮೆಯಾಗಿದೆ. ಯಾರ ಮನೆಯಲ್ಲಾದರೂ ಮಾಂಸದ ಅಡುಗೆ ತಯಾರು ಮಾಡುವ ಮೊದಲೇ ಆ ಪ್ರಾಣಿಯನ್ನು ಉಚ್ಚಂಗೆಮ್ಮ ದೇವಿಯ ಹೆಸರಲ್ಲಿ ಅದಕ್ಕೆ ಪೂಜಾ ವಿಧಾನ ನೆರವೇರಿಸಿ ಕೋಟೆಯೊಳಗೆ ಹೋಗುವ ಮಾರ್ಗ ಮಧ್ಯದ ಅಮ್ಮನ ಕಟ್ಟೆಯ ಮುಂಭಾಗದಲ್ಲಿ ಅದನ್ನು ಕಡಿದು ಕೊಂಡು ಹೋಗುತ್ತಾರೆ. ಉಚ್ಚಂಗಿದುರ್ಗದ ಎಲ್ಲ ಜನರೊಂದಿಗೆ, ಸಭೆ ಸಮಾರಂಭ ಇತ್ಯಾದಿಗಳಲ್ಲಿ ಬೆರೆಯುತ್ತಾರೆ. ಊರಿನಲ್ಲಿ ಯಾವುದೇ ಕಾರ್ಯ ನಿರ್ವಹಿಸುತ್ತಾರೆ. ಈ ಜನಾಂಗದ ನಾಯಕರು ಪಾಲ್ಗೊಳ್ಳಲೇ ಬೇಕಾಗುವುದು.

ಬಾರಿಕೇರ ಅಥವಾ ಗಂಗಾ ಮತಸ್ಥರು :

ಊರಿನೊಂದಿಗೆ ಮತ್ತು ಉಚ್ಚಂಗಿ ದೇವಿಯೊಂದಿಗೆ ಉತ್ತಮ ಸಂಬಂಧ ಹೊಂದಿರುವುದು ತಿಳಿದುಬರುವುದು. ಗಂಗಾ ಮತಸ್ಥರಲ್ಲನೇಕರು ಉಚ್ಚಂಗೆಮ್ಮನನ್ನು ಮನೆ ದೇವರಾಗಿ ಮಾಡಿಕೊಂಡಿದ್ದಾರೆ. ಕೆಲವು ಜನಾಂಗ ಕೆಲವು ಬಾರಿ ಉತ್ಸವ ಜಾತ್ರೆ ಹಬ್ಬಗಳಲ್ಲಿ ಭಾಗವಹಿಸಿ ತಮ್ಮದೇ ಆದ ಕೆಲವು ಕಾರ್ಯ ಮಾಡುತ್ತಾರೆ. ಕಾಯು ಕೋಲು ಹಿಡಿಯುವ ಕೆಲಸವು ಕೆಲವು ಬಾರಿ ಇವರಾದಾಗಬಹುದಾದುದು ತಿಳಿದುಬರುತ್ತದೆ.

ಮಡಿವಾಳರು :

ಪ್ರತಿಯೊಂದು ಊರು, ಕೇರಿಗಳಲ್ಲಿಯೂ ಬಹುತೇಕ ಜನಾಂಗದವರು ಮಡಿವಾಳರನ್ನು ಅವಲಂಬಿಸಿದ್ದಾರೆ. ಊರುಗಳೊಂದಿಗೆ ಇವರದು ಬಿಡಿಸಲಾಗದ ನಂಟು.

ಮಗು ಹುಟ್ಟಿದಾಗ, ಋತುಮತಿಯಾದಾಗ, ಮದುವೆಗಳಲ್ಲಿ, ಸತ್ತಾಗ ಇವರ ಕಾರ್ಯ ಇದ್ದೇ ಇರುತ್ತದೆ. ಉಚ್ಚಂಗೆಮ್ಮನನ್ನು ಮನೆದೇವರನ್ನಾಗಿ ಮಾಡಿಕೊಂಡವರಾನೇಕರು ಕಂಡುಬರುತ್ತಾರೆ. ಈ ದೇವತೆಗೆ ಇವರ ಕಾರ್ಯವೂ ಇರುತ್ತದೆ. ಉಚ್ಚಂಗೆಮ್ಮ ಬೆಟ್ಟದ ಮೇಲಿನಿಂದ ಕೆಳಗೆ ಬರುವಾಗ ಮಡಿಯನ್ನು ಹಾಸುತ್ತಾರೆ. ದೇವತೆಗೆ ಸಂಬಂಧಪಟ್ಟ ಬಟ್ಟೆಗಳನ್ನು ಸ್ವಚ್ಛ ಮಾಡುವ ಇತ್ಯಾದಿ ಕಾರ್ಯಗಳನ್ನು ಮಾಡುತ್ತಾರೆ.

ಕುಂಬಾರರು :

ಊರಿನಲ್ಲಿ ಮದುವೆ ಕಾರ್ಯದಲ್ಲಿ ದೇವತೆಯ ಹಬ್ಬಗಳಲ್ಲಿ ಕೇಲನ್ನು (ಕುಂಭ)ಒದಗಿಸುತ್ತಾರೆ. ಹೂವಿನ ದಂಡೆಗಳನ್ನು ತಯಾರು ಮಾಡುತ್ತಾರೆ. ಕುಂಬಾರರಲ್ಲಿ ಕೆಲವರು ಉಚ್ಚಂಗೆಮ್ಮನನ್ನು ಮನೆದೇವರಾಗಿ ಪೂಜಿಸುತ್ತಾರೆ.

ಕುರುಬರು :

ಊರಿನ ಜನಸಂಖ್ಯೆಯಲ್ಲಿ ಇವರದ್ದೇ ಸಿಂಹಪಾಲು. ಕುರುಬರು ಹಿರೇ ಹಬ್ಬ ಮತ್ತು ಯುಗಾದಿ ಇತ್ಯಾದಿ ಕೆಲವು ಸಣ್ಣ ಹಬ್ಬಗಳಿಗೆ ಹರೆಮರಿಗಳನ್ನು[19] ಮತ್ತು ಅಂಯುಗಾರರಿಗೆ ಕೊಡುವ ಕುರಿಮರಿಗಳನ್ನು ಉಚಿತವಾಗಿ ದೊರಕಿಸುವರು. ಕುರಿ ಮತ್ತು ಮೇಕೆಗಳಿದ್ದ ಕುರುಬರೆಲ್ಲಾರೂ ಸೇರಿಕೊಂಡು ಅವರಲ್ಲಿ ಒಬ್ಬನನ್ನು ಕುರುಬಗೌಡನನ್ನಾಗಿ ಆರಿಸಿಕೊಳ್ಳುತ್ತಾರೆ. ಅವನ ಅಧೀನತ್ವದಲ್ಲಿ ಕುರಿ ಮತ್ತು ಮೇಕೆಗಳನ್ನು ಹೊಂದಿರುವ ಆಧಾರದ ಮೇಲೆ ಸಂಗ್ರಹಿಸಿ ಈ ಕಾರ್ಯ ನೆರವೇರಿಸುತ್ತಾರೆ. ಮೈಲಾರಲಿಂಗಪ್ಪನ ಭಕ್ತರು ಉಚ್ಚಂಗೆಮ್ಮನಿಗೆ ಪೂಜಿಸುತ್ತಾರೆ. ಮೊದಲು ಈ ಪದ್ಧತಿ ಇರಲಿಲ್ಲವಂತೆ. ಈಗ ಅದು ಬದಲಾವಣೆಯನ್ನು ಕಂಡಿದೆ.

ಲಿಂಗಾಯತರು :

ಉಚ್ಚಂಗಿ ದುರ್ಗದಲ್ಲಿ ಪಂಚಾಚಾರ್ಯ ಲಿಂಗಾಯತ, ಹಾಗೂ ಸಾಧು ಲಿಂಗಾಯತ ಜನಾಂಗದವರು ಇದ್ದು ಗುಡ್ಡದ ಮೇಲಿರುವ ಲಿಂಗಾಯತ ಜನಾಂಗವೇ ಉಚ್ಚಂಗೆಮ್ಮನ ಅರ್ಚಕರಾಗಿದ್ದಾರೆ. ಇವರನ್ನು ಉಚ್ಚಂಗೆಮ್ಮ ಪೂಜೆ ಮಾಡುವುದಕ್ಕಾಗಿ ಕಮ್ಮತ್ತಹಳ್ಳಿಯಿಂದ ಕರೆಸಿಕೊಂಡರೆಂದು ಅಲ್ಲಿಯವರು ಅಭಿಪ್ರಾಯಪಡುತ್ತಾರೆ. ಇವರಿಗೆ ದೇವರ ಭೂಮಿಯನ್ನು ಕೊಡಲಾಗಿದೆ. ಸಾಮಾನ್ಯವಾಗಿ ಇವರು ಉಚ್ಚಂಗೆಮ್ಮನನು

ಮನೆದೇವರನ್ನಾಗಿ ಮಾಡಿಕೊಳ್ಳುವುದಿಲ್ಲ. ಅರ್ಚಕರ ಮನೆಯಲ್ಲಿ ಜೈನು, ಗೆಜ್ಜೆ, ಬೆಳ್ಳಿ ಉಡಿದಾರ, ಸೊಂಟಪಟ್ಟಿ ಕಟ್ಟಬಾರದೆಂಬ ನಿಯಮವಿದೆಯಂತೆ ಮಂಚದ ಮೇಲೆ ಮಲಗಬಾರದೆಂಬ ನಿಯಮವೂ ಉಂಟು. ಆದರೆ ಇತ್ತೀಚೆಗೆ ಸಾಕಷ್ಟು ಬದಲಾಗಿರುವುದು ಕಂಡುಬರುತ್ತದೆ.

ಚೆಲುವಾದಿಗಳು :

ಸುಮಾರು 15 ಮನೆಗಳನ್ನು ಹೊಂದಿರುವ ಇವರು ಉಚ್ಚಂಗೆಮ್ಮನ ದೇವತೆಗಳನ್ನೊಳಗೊಂಡಂತೆ ಊರಿನಲ್ಲಿ ಯಾವುದೇ ದೇವರ ಕಾರ್ಯವಾದರೂ ಉಚಿತ ವಾದನವನ್ನು ಬಾರಿಸುತ್ತಾರೆ.

ಇತರರು :

ಮುಸ್ಲಿಂರು, ವಡ್ಡರು, ಬ್ರಾಹ್ಮಣರು, ಹಡಪದರು, ಕೊಮಟಿಗರು, ಗಾಣಿಗರು, ಅಕ್ಕಸಾಲಿಗರು, ಇಂತಹ ಜನಾಂಗದವರು, ಉಚ್ಚಂಗಿದುರ್ಗದಲ್ಲದೇ ಊರಿನೊಂದಿಗೆ, ಉಚ್ಚಂಗೆಮ್ಮನೊಂದಿಗೆ ಉತ್ತಮ ಸಂಬಂಧವನ್ನು ಹೊಂದಿದ್ದಾರೆ.

ಈ ಮೇಲಿನ ಅಂಶಗಳಿಂದ ಉಚ್ಚಂಗೆಮ್ಮ ದೇವತೆಯನ್ನು ಕೆಳಜಾತಿ ಜನಾಂಗದವರು ಹೆಚ್ಚಾಗಿ ಕುಲದೇವರಾಗಿ ಮಾಡಿಕೊಂಡಿರುವುದನ್ನು ಗ್ರಹಿಸಲಾಗಿದೆ. ಉಚ್ಚಂಗೆಮ್ಮನ ಅರ್ಚಕರು ಅಲ್ಲಿಯವರೇ ಆಗಿರದೆ ಹೊರಗಿನಿಂದ ಬಂದವರೆಂದು ತಿಳಿಯುವದರಿಂದ ಈ ದೇವತೆಯ ಮೂಲ ಅರ್ಚಕರು, ಬೇರೆಯವರಾಗಿರಬೇಕು. ಉಚ್ಚಂಗೆಮ್ಮನ ದುರ್ಗದ ಜನತೆಯು ಆ ದೇವತೆಯ ಸಂಬಂಧವನ್ನು ಗಮನಿಸಿದರೆ ಈ ದೇವತೆಯು ಮೂಲ ದೇವತೆ ಎಂದು ಊಹಿಸಲಾವಕಾಶವಿದೆ.

ಉಚ್ಚಂಗೆಮ್ಮನನ್ನು ಮನೆದೇವರನ್ನಾಗಿ ಮಾಡಿಕೊಂಡವರು ಮಾಡುವ ವಿಧಿ ವಿಧಾನಗಳು :-

ಮನೆ ದೇವರೆಂದರೆ, ಮೂಲದೇವರೆಂದು ಇನ್ನುಳಿದವು ಉಪದೇವರೆಂದು ಭಾವಿಸಲಾಗುವುದು. ಯಾವ ಯಾವ ಜನಾಂಗದವರು ಈ ದೇವತೆಯನ್ನು ಮನೆ ದೇವರನ್ನಾಗಿ ಮಾಡಿಕೊಂಡಿದ್ದಾರೆ ಎನ್ನುವದನ್ನಾಗಲೇ ಚರ್ಚಿಸಲಾಗಿದೆ. ಹುಟ್ಟಿನಿಂದ ಮರಣದವರೆಗೂ ಎಡಬಿಡದೆ ಸಂಬಂಧಗಳು ಮನೆದೇವರಗೊಂದಿಗೆ ಇರುತ್ತವೆ.

ಮಗು ಹುಟ್ಟಿದಾಗ ಉಚ್ಚಂಗೆಮ್ಮನ ಹೆಸರನ್ನೇ ಇಡುವ ಪದ್ಧತಿಗಳಿವೆ. ಉದಾ: ಉಚ್ಚಂಗೆಪ್ಪ, ಉಚ್ಚಂಗೆವ್ವ ಇತ್ಯಾದಿ. ಇಂದಿಗೂ ಹೆಸರಿಡುವ ಪದ್ಧತಿ ಕಂಡು ಬರುತ್ತದೆ. ಸಾಮಾನ್ಯವಾಗಿ ಮೇಲ್ಜಾತಿಯವರಿಗಿಂತ ಕೆಳಜಾತಿಯ ಜನಾಂಗಗಳಲ್ಲಿ ಹೆಚ್ಚಾಗಿ ಕಂಡುಬರುತ್ತವೆ.

ಮನೆ ದೇವರನ್ನಾಗಿ ಉಚ್ಚಂಗೆಮ್ಮನನ್ನು ಮಾಡಿಕೊಂಡವರು ಕಾಲಿಗೆ ಚೈನು, ಗೆಜ್ಜೆ, ಸೊಂಟಕ್ಕೆ ಬೆಳ್ಳಿ ಉಡದಾರ ಕಟ್ಟ ಬಾರದೆಂಬ ನಿಯಮವಿದೆ. (ಇತ್ತೀಚೆಗೆ ನಾಗರಿಕತೆ ಸೋಂಕು ತಗಲುತ್ತಿರುವ ಗ್ರಾಮವಾಗಿದೆ.) ಪಟ್ಟಣಗಳಲ್ಲಿ ಈ ನಿಯಮಗಳನ್ನು ಮೀರಿ ಚೈನು ಗೆಜ್ಜೆ ಕಟ್ಟುತ್ತಾರೆ. ಅರ್ಚಕರು ಈ ನಿಯಮಕ್ಕೆ ಬದ್ಧರಾಗಬೇಕು. ಇದಕ್ಕೆಲ್ಲ ಈ ಕೆಳಗಿನ ನಂಬಿಕೆಯೇ ಕಾರಣವಾಗಿದೆ. ಒಂದುಸಲ ಅರ್ಚಕರು ದೇವತೆಗೆ ಪೂಜೆ ಮಾಡುವಾಗ ನೈವೇದ್ಯ ಮರೆತು ಬಂದಿದ್ದರ ಅರಿವಾಗಿ ಜೊತೆಯಲ್ಲಿದ್ದ ಮಗುವನ್ನು ಅಲ್ಲಿಯೇ ಬಿಟ್ಟು ಮನೆಗೆ ಹೋಗಿ ನೈವೇದ್ಯ ತರುವದರೊಳಗೆ ಮಗುವನ್ನು ದೇವಿ ನುಂಗಿರುವ ದೃಶ್ಯ ಕಂಡುಬಂತಂತೆ. ಆಗ ಮಗುವಿನ ಎರಡು ಪಾದಗಳು ಮಾತ್ರ ಹೊರಗುಳಿದಿದ್ದವು (ಗೆಜ್ಜೆ ಮತ್ತು ಚೈನು ಕಟ್ಟುವ ಭಾಗ) ಇದರಿಂದ ಈ ಪದ್ಧತಿ ಬೆಳೆದು ಬಂದಿತೆಂಬ ಅಭಿಪ್ರಾಯಗಳಿವೆ. ಕರಿಬಟ್ಟೆ ಧರಿಸುವದಾಗಲಿ ಮತ್ತು ಮಂಚದ ಮೇಲೆ ಮಲಗುವದಕ್ಕಾಗಲಿ ಜನಾಂಗದ ವಿರೋಧವಿದೆ. ಋತುಮತಿಯಾದಾಗ ಉಚ್ಚಂಗೆಮ್ಮ ಹೆಸರಿನಲ್ಲಿ ಪೂಜೆ ಕಾರ್ಯ ನಡೆಯುವುದು. ಕುಲದೇವರಾಗಿ ಮಾಡಿಕೊಂಡವರ ಮನೆಯಲ್ಲಿ ಮದುವೆ ನಡೆದರೆ ಮೊದಲು ಉಚ್ಚಂಗೆಮ್ಮನ ದೇವಸ್ಥಾನಕ್ಕೆ ಹೋಗಿ ಸೀರೆ, ಕುಪ್ಪುಸ ಮಾಡಿ ಉಡಿ ತುಂಬಿಸಬೇಕು ಮತ್ತು ಮದುವೆಯ ಮೊದಲು ಗಂಡು ಲಿಕ್ಕೆ ಅಥವಾ ಬೇವಿನ ತೊಪ್ಪಲಿನಿಂದ ಉಟುಗೆ ಉಡಬೇಕು.

ಉಚ್ಚಂಗೆಮ್ಮ ದೇವಸ್ಥಾನದ ಹತ್ತಿರ ಮಾರ್ಗದಿಂದ ಉಟುಗೆ ಉಟ್ಟು ದೇವಸ್ಥಾನದ ಒಳಬಂದು ತೆಗೆಯಬಹುದು ಅಥವಾ ಪರಊರಿನಿಂದ ಇಲ್ಲಿಗೆ ಬಂದು ಈ ಕಾರ್ಯ ಮಾಡಲಾಗದಿದ್ದರೆ ತಮ್ಮ ಊರಿನಲ್ಲಿಯೇ ಒಂದು ನಿರ್ದಿಷ್ಟ ಸ್ಥಳದಿಂದ ಉಟುಗೆ ಉಟ್ಟು ಸುಮಾರು ಒಂದು ಫರ್ಲಾಂಗ ಮುಂದೆ ಹೋಗಿ ದೇವಿಯ ಹೆಸರಲ್ಲಿ ಬಿಟ್ಟು ಬರಬಹುದು. ನಂತರ ಪಡಲಗಿಯನ್ನು ತುಂಬಸಬೇಕು.

ಮನೆಯಲ್ಲಿ ಮುತ್ತು ಕಟ್ಟಿಸಿ ಕೊಂಡವರು ಸತ್ತರೆ ಅವರನ್ನು ಸುಡಲೇ ಬೇಕೆಂಬ ನಿಯಮವಿದೆ.

<u>ಇತರೆ ಆಚರಣೆಗಳು :</u>

ಯುಗಾದಿ, ಭರತಹುಣ್ಣಿಮೆ, ದಸರಾ, ಕಾರ್ತಿಕದ ಹುಣ್ಣಿಮೆ, ನೂಲ ಹುಣಿಮೆಗಳಲ್ಲಿ ಪಡಲಗಿಯನ್ನು ಸಾಮಾನ್ಯವಾಗಿ ತುಂಬಿಸಬೇಕು.

ಯುಗಾದಿಯಲ್ಲಿ ಮನೆಯಲ್ಲಿ ಯಾರಾದರೊಬ್ಬರು ಉಚ್ಚಂಗೆಮ್ಮಗೆ ಹೋಗಿ ಹಣ್ಣು, ಕಾಯಿ ಮಾಡಿಸಿಕೊಂಡು ಉಡಿ ತುಂಬಿಸಿ ಬರಬೇಕು. ಮಾಂಸಹಾರಿಗಳಾದರೆ ದೇವಿಯ ಹೆಸರಲ್ಲಿ ಮನೆಯಲ್ಲಿಯೇ(ಕುರಿ, ಮೇಕೆ)ಬಲಿಕೊಟ್ಟು ಸೇವಿಸಬೇಕು. ಮುದ್ರೆಯನ್ನು[20] ಕೆಲವರು ಹಾಕಿಸಿಕೊಳ್ಳುತ್ತಿದ್ದರು. ಈಗ ಅದರ ಪ್ರಮಾಣ ಬಹಳ ಕಡಿಮೆಯಾಗಿದೆ. ಮುದ್ರೆಯನ್ನು ಸಾಮಾನ್ಯವಾಗಿ ತೋಳಭಾಗದಲ್ಲಿ ಹಾಕುತ್ತಾರೆ. ಸ್ತ್ರೀಯರಿಗಾದರೆ ಎರಡು ತೋಳುಗಳಲ್ಲದೆ ಸೊಂಟದ ಮೇಲ್ಭಾಗದಲ್ಲಿ ಪುರುಷರಿಗಾದರೆ ಎರಡು ತೋಳುಗಳಲ್ಲಿ ಮಾತ್ರ ಮುದ್ರೆ ಹಾಕಿಸುತ್ತದ್ದರು.

ತಮಗೆ ಕಷ್ಟ ಬಂದಾಗ ಸಿಡಿಯಾಡುತ್ತೇವೆ[21] ಅಂದುಕೊಂಡವರು ಉಚ್ಚಂಗಿದುರ್ಗದ ಬೆಟ್ಟದ ಮೇಲಿರುವ ರಾಜನ ಅರಮನೆಯ ಮುಂಭಾಗದಲ್ಲಿರುವ ಭೈರಪ್ಪನ ವಿಗ್ರಹದ ಮುಂಭಾಗದಲ್ಲಿ ಸಿಡಿಯಾಡುತ್ತಾರೆ . ನಂತರ ದೇವಿಯ ಸ್ಥಾನಕ್ಕೆ ಹೋಗಿ ಬರುವ ಪದ್ಧತಿ ಇದೆ. ಈ ದೇವತೆಯ ಉಗ್ರತೆಯನ್ನು ಕೆಲ ಅಂಶಗಳಿಂದ ಗ್ರಹಿಸಲಾಗಿದೆ. ಮುದ್ರೆ ಹಾಕಿಸಲ್ಪಟ್ಟರೂ, ಸಿಡಿಯಾಡುವುದು ಪುರುಷ ದೇವತೆಯ ಲಕ್ಷಣಗಳಾಗಿವೆ. ಮತ್ತು ಜನತೆಯೊಂದಿಗೆ ಈ ದೇವತೆ ನಿಕಟ ಸಂಬಂಧವನ್ನು ಹೊಂದಿರುವುದು ತಿಳಿದು ಬರುತ್ತದೆ.

## ಮುತ್ತು ಕಟ್ಟಿಸುವ ಪದ್ಧತಿ :

ಗಂಡು ಮದುವೆಯ ಅವಧಿಯಲ್ಲಿ ಹೆಣ್ಣಿಗೆ ತಾಳಿ ಕಟ್ಟಿದರೆ ಮುಗಿಯುತು. ಅವಳು ಗಂಡನ ಅಧೀನದಲ್ಲಿರಬೇಕಾಗುತ್ತದೆ. ಹಾಗೆಯೇ ಉಚ್ಚಂಗೆಮ್ಮನ ಹೆಸರಿನಲ್ಲಿ ಮುತ್ತು ಕಟ್ಟಿಸಿಕೊಂಡವರು ದೇವಿಯ ಅಧೀನದಲ್ಲಿ ಇರಬೇಕಾಗುತ್ತದೆ. ಇದರಲ್ಲಿ ಅನೇಕ ಪ್ರಭೇದಗಳಿವೆ, ಒಂದು ಕನ್ನೆ ಮುತ್ತು, ಎರಡು ಗರತಿ ಮುತ್ತು, ಮತ್ತು ಮೂರು ಗಂಡಸು ಮುತ್ತು.

### ಕನ್ನೆ ಮುತ್ತು :

ಕನ್ನೆ– ಹುಡುಗಿಗೆ ದೇವತೆಯ ಹೆಸರಿನಲ್ಲಿ ಮುತ್ತುಗಳನ್ನು ಕಟ್ಟಿಸುವದಾಗಿದೆ. ಮುತ್ತು ಕಟ್ಟಿಸಿದರೆ ದೇವರಿಗೆ ಬಿಟ್ಟಂತೆ ದೇವದಾಸಿ ಎಂಬ ಪದ್ಧತಿ ಇದೆ. ಹುಡುಗಿ ಇರುವಾಗಲೆ (ಚಿಕ್ಕವಯಸ್ಸಿನಲ್ಲಿಯೇ) ಈ ಕನ್ನೆ ಮುತ್ತನ್ನು ಕಟ್ಟಿಸುತ್ತಾರೆ. ಈ ಮುತ್ತು ಕಟ್ಟಿದ ಮೇಲೆ ಸಂಪ್ರದಾಯದ ಪ್ರಕಾರ ಮದುವೆಯಾಗುವ ಹಾಗಿಲ್ಲ. ಜೀವನಪೂರ್ತಿ ಹಾಗೇ ಉಳಿಯಬೇಕಾಗುತ್ತದೆ. ಈ ಮುತ್ತು ಕಟ್ಟಿಸಿಕೊಂಡವಳು ಯಾವ ಪರ ಪುರುಷನೊಂದಿಗೆ ಲೈಂಗಿಕ ಸಂಪರ್ಕ ಇಟ್ಟುಕೊಳ್ಳಬಹುದು. ಇದಕ್ಕೆ ಸಮಾಜದ ಮತ್ತು ಮನೆಯವರ ವಿರೋಧ ಇಲ್ಲ. ಅವಳು ಸ್ವತಂತ್ರಳು. ಇವಳಿಗೆ ಇಷ್ಟ ಬಂದ ಜನರೊಂದಿಗೆ ಬೆರೆಯಬಹುದು. ಈ ಕನ್ನೆ ಮುತ್ತು ಕಟ್ಟಿಸಲು ಕೆಲವು ಉದ್ದೇಶಗಳಿವೆ. ತಮಗೆ ಗಂಡು ಮಕ್ಕಳಾಗದಿದ್ದರೆ ತಮ್ಮ ಆಸ್ತಿ ನೋಡಿಕೊಳ್ಳುವದಕ್ಕೆ ಮತ್ತು ಆಸ್ತಿಯನ್ನು ಅನುಭವಿಸಲು ಮಗಳನ್ನು ಮದುವೆ ಮಾಡಿ ಕೊಡದೆ ಮನೆಯಲ್ಲಿಯೇ ಉಳಿಸಿಕೊಳ್ಳುತ್ತಾರೆ. ಎರಡನೆಯದಾಗಿ ಉಚ್ಚಂಗೆಮ್ಮನನ್ನು ಮನೆ ದೇವರಾಗಿ ಮಾಡಿಕೊಂಡದ್ದು ಬೇಡಿಕೊಂಡವರು ತಮ್ಮ ಮಗಳನ್ನು ದೇವರಿಗೆ ಬಿಡುತ್ತಾರೆ. ಗಂಡು ಮಕ್ಕಳಂತೆ ಮುತ್ತು ಕಟ್ಟಿಸಿಕೊಂಡವಳಿಗೂ ಆಸ್ತಿಯಲ್ಲಿ ಪಾಲು ಸಿಗುತ್ತದೆ. ಇವರಿಗೆ ಜಡಿ ಬರಬೇಕೆಂಬ ನಿಯಮವಿಲ್ಲ. ಕೊರಳಲ್ಲಿ ತಾಳಿ ಮತ್ತು ಮುತ್ತಿನ ಸರವನ್ನು ಹೊಂದಿರುತ್ತಾರೆ. ಈ ಮುತ್ತನ್ನು ಉಚ್ಚಂಗಿದುರ್ಗದ ಉಚ್ಚಂಗೆಮ್ಮನ ದೇವಾಲಯಕ್ಕೆ ಹೋಗಿ ಕಟ್ಟಿಸಿ ಕೊಂಡು ಬರುತ್ತಾರೆ. ''ಇಂತಹ ಕನ್ನೆ ಮುತ್ತುಗಳನ್ನು ಈಗಲೂ ಉಚ್ಚಂಗಿ ದುರ್ಗದ ಮತ್ತು ಸುತ್ತ ಮುತ್ತಲೂ ಗ್ರಾಮಗಳಲ್ಲಿ ಈ ದೇವಿಯ ಹೆಸರಿನಲ್ಲಿ ಕಟ್ಟಿಸುತ್ತಿರುವುದನ್ನು ಕಾಣಬಹುದಾಗಿದೆ.'' ಸಾಮಾನ್ಯವಾಗಿ ಈ ಕನ್ನೆ ಮುತ್ತು ಕಟ್ಟಿಸುವ ಪದ್ಧತಿ ಮಾದಿಗರಲ್ಲಿ ಹೆಚ್ಚು ಕಂಡು ಬರುತ್ತದೆ.

## ಗರತಿ ಮುತ್ತು :

ಮದುವೆಯಾದ ಸ್ತ್ರೀಯರು ಗಂಡನನ್ನು ಹೊಂದಿದ್ದು ಮುತ್ತನ್ನು ಕಟ್ಟಿಸಿಕೊಳ್ಳುತ್ತಾರೆ. ಆದರೆ ಕನ್ನೆ ಮುತ್ತು ಕಟ್ಟಿಸಿಕೊಂಡವರಿಗೂ ಇವರಿಗೂ ತುಂಬಾ ವ್ಯತ್ಯಾಸಗಳಿವೆ. ಸಂಪ್ರದಾಯದಂತೆ ಕುಲದೇವತೆಯಾಗಿ ಉಚ್ಚಂಗೆಮ್ಮನನ್ನು ಮಾಡಿಕೊಂಡವರು ಮುತ್ತು ಕಟ್ಟಿಸಿಕೊಳ್ಳುವ ಪದ್ಧತಿ ಇದೆ. ಕೆಲವರಿಗೆ ಇದ್ದಕ್ಕಿದ್ದಂತೆ ಜಡೆ ಬರುವುದಕ್ಕೆ ಪ್ರಾರಂಭಿಸುವುದಂತೆ. ಮತ್ತು ಕನಸಿನಲ್ಲಿ ಉಚ್ಚಂಗೆಮ್ಮ ಬಂದು ಪೀಡಿಸುವಳಂತೆ. ಹಾಗಾಗಿ ದೇವರನ್ನು ಹೊರುತ್ತಾರೆ. ದೇವತೆ ಇವರನ್ನು ಆವೇಶಿಸುತ್ತಾಳೆ. ದೇವತೆ ಒಲಿದವರು ಎಂದು ಕರೆಯುತ್ತಾರೆ. ಇವರಿಗೆ ಜೋಗಮ್ಮಗಳೆಂದು ಹೆಸರಿಸುವುದುಂಟು. ಇವರೂ ಮುತ್ತು ಕಟ್ಟಿಸಿಕೊಳ್ಳುತ್ತಾರೆ. ಆದರೆ ಕನ್ನೆ ಮುತ್ತು ಕಟ್ಟಿಸುವವರು ತಾವಾಗಿಯೇ ಕಟ್ಟಿಸುತ್ತಾರೆ ವಿನಃ ಅದು ದೇವತೆಯ ಆವೇಶ ಅಲ್ಲವಂತೆ. ಗರತಿ ಮುತ್ತು ಕಟ್ಟಿಸಿಕೊಂಡವರು ಮನೆಯಲ್ಲಿಯೇ ತಮ್ಮ ವಿಧಿ ವಿಧಾನಗಳನ್ನು ಮಾಡಿಕೊಳ್ಳುತ್ತಾರೆ. ಈ ಗರತಿ ಮುತ್ತು ಕಟ್ಟಿಸುವವರು ಸಾಮಾನ್ಯವಾಗಿ ಕೆಲವು ಮಾದಿಗರು ಮತ್ತು ತಳವಾರರು, ಉಪ್ಪಾರರು ಇತ್ಯಾದಿಯವರು.

## ಗಂಡಸು ಮುತ್ತು :

ಉಚ್ಚಂಗೆಮ್ಮನನ್ನು ಕುಲದೇವರಾಗಿ ಹೊಂದಿದ್ದು ಮನೆಯಲ್ಲಿ ಸಂಪ್ರದಾಯದಂತೆ ಗಂಡು ಮಕ್ಕಳಿಗೂ ಮುತ್ತನ್ನು ಕಟ್ಟಿಸುತ್ತಾರೆ. ಈ ಮುತ್ತನ್ನು ಕಟ್ಟಿಸದಿದ್ದರೆ ಮದುವೆಯಾಗಲು ಬರುವುದಿಲ್ಲವಂತೆ. ಇವರು ಮದುವೆಯಾದರೆ ಮನೆಯಲ್ಲಿರುತ್ತಾರೆ. ಇಲ್ಲದಿದ್ದರೆ ಜೋಗಪ್ಪಗಳಾಗುತ್ತಾರೆ. ಇದರಲ್ಲಿಯೂ ದೇವರೊಲಿಯುವ ನಂಬಿಕೆ ಇದೆ. ದೇವರೊಲಿದ ಪುರುಷರು ಜಡೆ ಬಿಡುತ್ತಾರೆ. ಸೀರೆ, ಕೈಗೆ ಬಳೆ ಹಾಗೂ ಹೆಂಗಸರಂತೆ ವೇಷ ಭೂಷಣಗಳನ್ನು ಧರಿಸುತ್ತಾರೆ. ಕೆಲವರು ಪಂಚೆ, ಅಂಗಿ ಧರಿಸಿ ಕೈಗೆ ಬಳೆ ಮಾತ್ರ ತೊಡುತ್ತಾರೆ. ಉಚ್ಚಂಗೆಮ್ಮನನ್ನು ಕುಲದೇವತೆಯನ್ನಾಗಿ ಮಾಡಿಕೊಂಡ ಬಹುತೇಕ ಜನಾಂಗಗಳಲ್ಲಿ ಇದು ಕಂಡು ಬರುತ್ತದೆ.

'' ಮುತ್ತು ಕಟ್ಟುವ ಪದ್ಧತಿಯ ವಿಧಿ ವಿಧಾನಗಳು :

ಉಚ್ಚಂಗೆಮ್ಮನ ದೇವದಾಸಿಯರು, ಜೋಗತಿಗಳು, ಜೋಗಪ್ಪ ಇವರುಗಳು ಮುತ್ತುಗಳನ್ನು ಕಟ್ಟಿಸಿಕೊಳ್ಳುವದು ಕಂಡು ಬರುತ್ತದೆ. ಸಾಮಾನ್ಯವಾಗಿ ಗಂಡಸರು 5 ರಿಂದ 9 ರ ಒಳಗೆ ಮುತ್ತು ಕಟ್ಟದ ದಾರವನ್ನು ಕೊರಳಿಗೆ ಕಟ್ಟಿಸಿ ಕೊಂಡಿರುತ್ತಾರೆ. ಗರತಿಯರೂ ಇದೇ ರೀತಿ ಮುತ್ತು ಕಟ್ಟಿಸಿದ್ದರೆ, ಕನ್ಯೆಯರು ಸುಮಾರು ಮುತ್ತುಳ್ಳ ದಾರವನ್ನು ಕಟ್ಟಿಸಿಕೊಳ್ಳುತ್ತಾರೆ. ಮುತ್ತು ಕಟ್ಟಿಸಿ ಕೊಳ್ಳುವದು ಒಂದು ಪವಿತ್ರ ಪದ್ಧತಿ ಎಂಬುದು ಅವರ ನಂಬಿಕೆಯಾಗಿದೆ. ತಿಂಗಳಿಗಿಂತ ಮೊದಲೇ ಮುತ್ತು ಕಟ್ಟಿಸಿಕೊಳ್ಳುವುದಕ್ಕೆ ತಯಾರಿ ನಡೆಯುತ್ತದೆ. ಇದೊಂದು ಮದುವೆ ಕಾರ್ಯಗಳ ವೈಖರಿಯಂತೆ ನಡೆಯಲ್ಪಡುತ್ತದೆ. ಮುತ್ತು ಕಟ್ಟಿಸಿಕೊಳ್ಳುವವರು ಆ ದಿನ ಮಡಿಯಿಂದ ಇರಬೇಕು. ಉಪವಾಸ ಮಾಡಬೇಕಾಗುವದು. ಅಂದು ಅವರನ್ನು ವಿಶೇಷವಾಗಿ ಉಚ್ಚಂಗೆಮ್ಮನ ದೇವಸ್ಥಾನಕ್ಕೆ ಕರೆದೊಯ್ಯಲಾಗುವದು. ಅಲ್ಲಿ ಅವರಿಗೆ ಅರಿಶಿಣವನ್ನು ಹಚ್ಚಿ ನುರಗಿ ನೀರನ್ನು ಹಾಕುತ್ತಾರೆ. ಹೊಸ ಬಟ್ಟೆಯನ್ನು ಹಾಕಬೇಕು, ತಲೆಯ ಮೇಲೆ ದಂಡಿಯನ್ನು[22] ಕಟ್ಟಲಾಗುವದು. ಕಳಸವನ್ನು ಬೆಳಗಿಸಿ ನಂತರ ಮುತ್ತನ್ನು ಹಿರಿಯ ಜೋಗತಿ ಅಥವಾ ಅರ್ಚಕರು ಕಟ್ಟಬಹುದು. ಆಗ ಮುತ್ತು ಕಟ್ಟಿಸಿಕೊಂಡ ಇತರರು ಆಯಾ (ಕನ್ಯೆ, ಗರತಿ, ಗಂಡಸು) ಪ್ರಕಾರಗಳಲ್ಲಿ ತಮ್ಮ ಪಂಗಡಗಳಲ್ಲಿ ಸೇರಿಸಿಕೊಳ್ಳುತ್ತಾರೆ. ಈ ದೇವತೆಗೆ ಉಡಿ ತುಂಬಿಸಿ 'ಪಡಲಗಿ' ಪಡೆಯುವದು ಕಂಡು ಬರುತ್ತದೆ. ಇವರು ಪಡಲಗಿ ಪಡೆದ ಮೇಲೆ ಪ್ರತಿ ಹುಣ್ಣಿಮೆ ಅಮಾವಾಸೆ, ಮಂಗಳವಾರ ಮತ್ತು ಶುಕ್ರವಾರ ಊರಿನಲ್ಲಿ ಸಂಪ್ರದಾಯದಂತೆ ಭಿಕ್ಷೆಗೆ ಹೋಗಬೇಕು. ಕನಿಷ್ಟ ಐದು ಮನೆಗಾದರೂ ಹೋಗಬೇಕಂತೆ. ಅವರೊಂದಿಗೆ ಚೌರ[2], ಪಡಲಗಿ ಕೆಲವು ದೇವರ ಫೋಟೋ ಇರುವವು. ಕನ್ಯೆ ಮುತ್ತು ಕಟ್ಟಿಸಿಕೊಂಡವಳಿಗೆ ಭಿಕ್ಷೆ ಬೇಡಬೇಕೆಂಬ ನಿಯಮವಿಲ್ಲ. ಜೋಗತಿಯ ಜಡೆ ಕೂದಲು ಉದುರಿದರೆ, ಮತ್ತು ಅವರು ಸತ್ತಾಗ ಅವರ ಪಡಲಗಿ ಅವರ ಜಡೆ ಕೂದಲೊಂದಿಗೆ ಉಚ್ಚಂಗಿ ದುರ್ಗದ ಬೆಟ್ಟದ ಮೇಲಿನ ಪಡಲಗಿ ಕಟ್ಟೆಯ ಮೇಲೆ ಹಾಕಬೇಕು. ಈ ತರದ ವಸ್ತುಗಳು ಪಡಲಗಿ ಕಟ್ಟೆಯ ಮೇಲೆ ಬಿದ್ದಿರುವುದು ಇಂದಿಗೂ ಕಾಣಬಹುದಾಗಿದೆ. ಗರತಿ ಮುತ್ತು ಕಟ್ಟಿಸಿ ಕೊಂಡವರು ಗಂಡ ಸತ್ತ ಮೇಲೆ ದೇವರ ಕಾರ್ಯದಲ್ಲಿ ಭಾಗವಹಿಸಬಾರದೆಂಬ ನಿಯಮಗಳಿವೆ. ಇವರು ಮಾಂಸ ಅಥವಾ ಸಸ್ಯಾಹಾರಿಗಳೂ ಆಗಬಹುದು.

## ಸಮಾಜದಲ್ಲಿ ಮುತ್ತು ಕಟ್ಟಿಸಿಕೊಂಡವರ ಸ್ಥಾನ ಮಾನಗಳು :

ಸಮಾಜದಲ್ಲಿ ಎಲ್ಲರಂತೆ ಇವರ ಜೀವನ ಕ್ರಮವಾಗಿರದೆ ಭಿನ್ನತೆಯನ್ನು ಹೊಂದಿದಂತೆ ಕಂಡುಬರುತ್ತದೆ. '' ಕನ್ನೆ ಮುತ್ತು ಕಟ್ಟಿಸಿ ಕೊಂಡವರಿಗೆ ಸಮಾಜದಲ್ಲಿ ಕೀಳಿರಿಮೆ ಇದ್ದರೂ ಅವರಿಗದು ಪವಿತ್ರ ಭಾವನೆ. ಅದರೆ ಜೋಗತಿಗಳಿಗೆ ತುಂಬಾ ಗೌರವ ಮತ್ತು ಪೂಜ್ಯ ಭಾವನೆಯನ್ನು ವ್ಯಕ್ತಪಡಿಸಲಾಗುತ್ತದೆ. ಪ್ರತಿ ಹಬ್ಬ, ಉತ್ಸವ ಗಳಿಗೆ ಮನೆ ದೇವರಾಗಿ ಉಚ್ಚಂಗೆಮ್ಮನನ್ನು ಮಾಡಿ ಕೊಂಡವರು ಜೋಗುತಿಗಳನ್ನು ಕರೆದು ಪಡಲಗಿ ನೀಡಿಸಿ, ಪೂಜಿಸಿ, ಊಟ ಮಾಡಿಸಿ ಕಳಿಸಿಕೊಡುತ್ತಾರೆ.

'' ಈ ಮೇಲೆ ಚರ್ಚಿಸಿದ ಮುತ್ತು ಕಟ್ಟಿಸಿ ಕೊಳ್ಳುವ ಪದ್ಧತಿಗೆ'' ಕನ್ನೆಯರು ತಾವಾಗಿ ಪೋಷಕರು ಪ್ರೋತ್ಸಾಹಿಸುವುದು ತಿಳಿದುಬರುವುದಲ್ಲದೆ ಕ್ಷೇತ್ರಕಾರ್ಯದಲ್ಲಿ ಸೂಕ್ಷ್ಮ ಅವಲೋಕನದಿಂದ ಈ ಪದ್ಧತಿ ಇಂದಿಗೂ ಇರುವುದು ತಿಳಿದುಬರುತ್ತದೆ. ಗ್ರಾಮ ದೇವತೆ ಗಳು ಇಷ್ಟು ಪರಿಣಾಮಕಾರಿ ಮುತ್ತು ಕಟ್ಟಿಸಿಕೊಳ್ಳುವ ಪದ್ಧತಿಯು ಹಿನ್ನೆಲೆಯಾಗಿ ಇರುವುದು ವಿರಳ. ಹಾಗಾಗಿ ಉಚ್ಚಂಗೆಮ್ಮ ಗ್ರಾಮ ದೇವತೆಗಿಂತ ಸ್ವಲ್ಪ ಭಿನ್ನತೆಯನ್ನು ಹೊಂದಿದವಳಾಗಿದ್ದಾಳೆ ಎಂದು ಊಹಿಸಲವಕಾಶವಿದೆ.

## ಅಡಿಟಿಪ್ಪಣಿಗಳು :

1) ಸಾ.ಇ.ಇ. (ಸಂ) —9 ಸಂಖ್ಯೆ 126
2) ಸಾ.ಇ.ಇ. (ಸಂ). — 6 ಸಂಖ್ಯೆ 575
3) ಸಾ.ಇ.ಇ. (ಸಂ). — 6 ಸಂಖ್ಯೆ 574
4) ಸಾ.ಇ.ಇ. (ಸಂ). — 6 ಸಂಖ್ಯೆ 571
5) ಸಾ.ಇ.ಇ.(ಸಂ). — 9 ಸಂಖ್ಯೆ 271
6) ಸಾ.ಇ.ಇ. (ಸಂ) — 9 ಸಂಖ್ಯೆ 245
7) ಉಚ್ಚಂಗಿದುರ್ಗದ ಹಾಲಮ್ಮನ ಗುಡಿಯ ಮುಂದಿನ ಶಾಸನ
8) —"— ಕೋಟೆಯೊಳಗಿನ ಬಂಡೆ ಶಾಸನ
9) —"— ಸಿಬಾರ ಕಂಬದ ಶಾಸನ
10) —"— ಉಚ್ಚಂಗೆಮ್ಮ ದೇವಾಲಯದ ಬಲ ಬದಿಯ ಶಾಸನ
11) —"— —"— —"— ಎಡ ಬದಿಯ ಗಂಟೆ ಶಾಸನ
12) —"— —"— ಬಲ ಬದಿಯ —"—
13) ಅಕ್ಕಿ, ಕೊಬ್ಬರಿ ಬಟ್ಟಲು, ಉತ್ತುತ್ತಿ, ಅರಿಶಿಣಕೊಂಬು ಇತ್ಯಾದಿ ಇರುವುವು ಅವನ್ನು ದೇವಿಗೆ ಮುಂದಿಡುವುದು
14) ಕೋಣದ ರಕ್ತ ಮಾಂಸಗಳೊಂದಿಗೆ ಜೋಳ ಇತ್ಯಾದಿ ಧಾನ್ಯಗಳನ್ನು ಕುದಿಸಿರುವ ಪಾಕ
15) ಲಕ್ಕಿ ಅಥವಾ ಬೇವಿನ ತೊಪ್ಪಲುಗಳಿಂದ ಶರೀರದ ಭಾಗ ಮುಚ್ಚಿಕೊಳ್ಳುವುದು.
16) ನೀರು ತುಂಬದ ಕುಂಬ
17) ಇದು ರಾಜನ ಅರಮನೆಯ ಮುಂದಿದೆ
18) ದೇವದಾಸಿ ಪದ್ಧತಿ
19) ಚಿಕ್ಕದಾದ ಕುರಿ ಅಥವಾ ಮೇಕೆ
20) ದೇವತೆಯ ವಿಗ್ರಹದ ಚಿತ್ರ ಇರುವ ಹಲಗು
21) ಕಬ್ಬಣದ ಸರಪಳಿಯಿಂದ ಬಿಗಿದಿರುತ್ತಾರೆ.
22) ಹೂವಿನಿಂದ ಮಾಡಿದ ಮೂರು ಮೂಲೆಯ ಚಪ್ಪಟೆ ಆಕಾರ
23) ಕರಡಿ ಕೂದಲಿನಿಂದ ಕಂಚಿನ ಹಿಡಿಕಿ ಹಾಕಿ ಮಾಡಿರುವುದು.

## ಅಧ್ಯಾಯ — ಆರು :

## ಉಚ್ಚಂಗಿದುರ್ಗದಲ್ಲಿ ವಾಸ್ತು, ಮತ್ತು, ಮೂರ್ತಿಶಿಲ್ಪ

### ಉಚ್ಚಂಗಿ ದುರ್ಗದ ದೇವಾಲಯಗಳು

ಭರತಖಂಡ ಧರ್ಮ ಪ್ರಧಾನ ದೇಶ, ಇಲ್ಲಿಯ ಜನ ಅನಾದಿ ಕಾಲದಿಂದಲೂ ಧರ್ಮ ದೈವಗಳ ಬಗೆಗೆ ಅಪಾರ ಶ್ರದ್ಧೆ ಭಕ್ತಿ ನಿಷ್ಠೆಗಳನ್ನು ತೋರುತ್ತಾ ಬಂದಿದ್ದಾರೆ. ಧರ್ಮ ದೈವಗಳು ನಾಣ್ಯದ ಎರಡು ಮುಖಗಳಿದ್ದಂತೆ. ಅದರಲ್ಲೂ ದೈವ (ಎಂದರೆ ದೇವಾಲಯಗಳು) ಈ ದೇಶದ ಸಂಸ್ಕೃತಿಯನ್ನು ರೂಪಿಸುವಲ್ಲಿ ಮಹತ್ತರ ಪಾತ್ರ ನಿರ್ವಹಿಸಿವೆ. ಹಿಮಾಲಯದಿಂದ ಕನ್ಯಾಕುಮಾರಿಯವರೆಗೆ ಹರಡಿ ಹಬ್ಬಿ ನಿಂತಿರುವ ದೇವಾಲಯಗಳು ಭಕ್ತರಿಗೆ ಮುಕ್ತಿ ಮಂದಿರಗಳಾಗಿಯೂ ಸೌಂದರ್ಯ ಉಪಾಸಕರಿಗೆ ಕಲಾಕೇಂದ್ರಗಳಾಗಿಯೂ ಕಂಗೊಳಿಸುತ್ತಿವೆ. ಇವುಗಳ ನಿರ್ಮಾಣಕ್ಕೆ ಕಾರಣ ನಮ್ಮ ಜನತೆಯಲ್ಲಿ ಬೇರು ಬಿಟ್ಟಿರುವ ಭಕ್ತಿ ನಿಷ್ಠೆಗಳು. ಜನಪದರು ಅಣುರೇಣುತೃಣಕಾಷ್ಠಗಳಲ್ಲಿಯೂ ದೇವರು ಬೆರತುಕೊಂಡಿದ್ದಾನೆಂದು ಬಲವಾಗಿ ನಂಬಿದವರು. ಆಕಾರಣವಾಗಿಯೇ ಊರು, ಕೇರಿ, ಹಳ್ಳ, ಕೊಳ್ಳಗಳ ತೀರದಲ್ಲಿ ಮನೆ ಮಠಗಳಲ್ಲಿ ದೇವರುಗಳು ಬೆಳೆದು ನಿಂತಿವೆ. ಅವುಗಳಲ್ಲಿ ಮನೆದೇವರು, ಕುಲದೇವರು, ಗ್ರಾಮದೇವತೆಯೆಂದು ಪ್ರತ್ಯೇಕಿಸಿ ಆರಾಧಿಸುತ್ತಾ ಬಂದವರು.

ಉಚ್ಚಂಗಿ ದುರ್ಗವನ್ನು ಅಧ್ಯಯನಕ್ಕಾಗಿ ಕೈಗೆತ್ತಿಕೊಂಡಾಗ ಸರ್ವೇಕ್ಷಣ ಮಾಡಿದಾಗ ಅಲ್ಲಿ ಇರುವ ದೇವಾಲಯಗಳು ಹಾಗೂ ದೇವತೆಗಳು. ಈ ಕೆಳಕಂಡಂತಿವೆ. ಕೆಲವು ದೇವಾಲಯಗಳ ಸೂಕ್ಷ್ಮ ಪರಿಚಯವನ್ನು ಈ ಪ್ರಬಂಧದಲ್ಲಿ ಪ್ರಕಟಿಸಲು ಪ್ರಯತ್ನಿಸಲಾಗಿದೆ.

### ಬನಶಂಕರಿ ದೇವಾಲಯ :

ಉಚ್ಚಂಗಿ ದುರ್ಗದ ಆಗ್ನೇಯ ದಿಕ್ಕಿಗೆ ಅರಸನ ಬಾವಿಯಿದೆ. ಈ ಬಾವಿಯ ಬಳಿ ಇರುವುದೇ ಬನಶಂಕರಿಯ ದೇವಾಲಯ. 12ನೇ ಶತಮಾನಕ್ಕೆ ಸೇರಬಹುದಾದ ಈ ದೇವಾಲಯವನ್ನು ಕಾಡುಗಲ್ಲಿನಿಂದ ನಿರ್ಮಿಸಿದ್ದು, ಇದರಲ್ಲಿ ಬಳಪದ ಕಲ್ಲಿನ ಉಪಯೋಗ ಕಂಡುಬರುವುದಿಲ್ಲ. ಈ ದೇವಾಲಯವನ್ನು ಜೀರ್ಣೋದ್ಧಾರ ಮಾಡುವಾಗ ನವರಂಗ ಎಡ ಬದಿಯ ಗೋಡೆಯಲ್ಲಿ ವೀರಗಲ್ಲೊಂದು ಸೇರಿಸಿರುವುದನ್ನು ಕಾಣಬಹುದು.

ಪೂರ್ವಾಭಿಮುಖವಾಗಿರುವ ಬನಶಂಕರಿ ದೇವಾಲಯವು ಪದ್ಮಾಲಂಕೃತ ಮುಚ್ಚಳಿಕೆಗಳು, ಗರ್ಭಗೃಹ, ಅಂತರಾಳ, ನವರಂಗದ ಒಳ ಭಾಗದಲ್ಲಿದ್ದು, ಲಾಲಾಟ ಬಿಂಬದಲ್ಲಿ ಯಾವುದೇ ರೀತಿ ಅಲಂಕರಣೆ ಇರುವುದಿಲ್ಲ. ನವರಂಗದ ಮಧ್ಯಭಾಗದಲ್ಲಿ 6x6 ಅಳತೆಯ ಒಂದೇ ಬಂಡೆಯನ್ನು ಹಾಸಿದ್ದಾರೆ. ಬನಶಂಕರಿಯ ವಿಗ್ರಹವು ಗರ್ಭಗುಡಿಯಲ್ಲಿದ್ದು ಜಟಾಮುಕುಟಧಾರಿಯಾಗಿ ನಾಲ್ಕು ಕೈಗಳನ್ನು ಹೊಂದಿದ್ದು, ಕೈಗಳಲ್ಲಿ ಬಿಲ್ಲು, ಬಾಣ, ಶೂಲ, ಖಡ್ಗ, ಡಮರುಗಳು ಹೊಂದಿದ್ದಾಳೆ. ವೃತ್ತಾಕಾರದ ಪೀಠದಲ್ಲಿ ಚೇಳು, ರುಂಡಮಾಲೆ, ಪತ್ರಕುಂಡಲಗಳಿವೆ. ಮೂರ್ತಿಯು ಶಿಥಿಲವಾಗಿದೆ. ಸುಮಾರು 30 ಅಡಿ ಉದ್ದ 15 ಅಡಿ ಅಗಲವಾಗಿರುವ ಈ ದೇವಾಲಯವು ನವರಂಗದಲ್ಲಿ ನಾಲ್ಕು ಕಂಬಗಳು ಗೋಡೆಯ ಒಂದೇ ಮಗ್ಗುಲಲ್ಲಿ ಅಲಂಕೃತವಾಗಿರುವ ಹತ್ತು ಕಂಬಗಳಿವೆ. ಕಂಬವು ವೃತ್ತಾಕಾರದ 8 ಮೂಲೆಯ ಪಟ್ಟಿಕೆಯನ್ನು ಚೌಕಗಳನ್ನು ಕುಂಭ, ಮುಚ್ಚಳ, ಫಲಕ ಮತ್ತು ಬೋದಿಗೆಯನ್ನು ಒಳಗೊಂಡಿದೆ. ದಪ್ಪವಾಗಿದ್ದು ಕಂಬಗಳು ಆಕರ್ಷಣೀಯವಾಗಿವೆ.

ಈ ದೇವಾಲಯದ ಲಕ್ಷಣ ಮತ್ತು ವಿಗ್ರಹದ ಅವಲೋಕನದ ಆಧಾರದ ಮೇಲೆ ಇದು 12ನೇ ಶತಮಾನಕ್ಕೆ ಸೇರಿದ್ದಾಗಿರಬಹುದೆಂದು ಊಹಿಸಬಹುದಾಗಿದೆ.

## ಹಾಲಮ್ಮನ ದೇವಾಲಯ :

ಬನಶಂಕರಿ ದೇವಸ್ಥಾನದ ಪೂರ್ವ ಭಾಗದ ಹೊಲವೊಂದರಲ್ಲಿರುವುದೇ ಹಾಲಮ್ಮನ ದೇವಾಲಯ. ನಾಗರ ಪಂಚಮಿಯಲ್ಲಿ ಇಲ್ಲಿಯ ಹುತ್ತಕ್ಕೆ ಹಾಲು ಹಾಕುವದರಿಂದಲೋ ಏನೋ ಇದಕ್ಕೆ ಹಾಲಮ್ಮನ ಗುಡಿ ಎಂದು ಕರೆಯುತ್ತಿರುವುದು ಕಂಡುಬರುತ್ತದೆ. ಪೂರ್ವಾಭಿಮುಖವಾಗಿರುವ ಈ ದೇವಾಲಯವು ಸುಮಾರು 10x10 ಅಡಿ ಉದ್ದಗಲವೊಂದಿದೆ. ಸು. 7½ ಅಡಿ ಎತ್ತರವಾಗಿರುವ ಇದು 6 ಅಡಿ ಎತ್ತರದ ಕಂಬಗಳನ್ನು ಹೊಂದಿದ್ದು ಇವು ಅಲಂಕಾರದಲ್ಲವೆ. ಸ್ವಲ್ಪ ಕಾಡುಗಲ್ಲು ಮಿಶ್ರವಾದ ಕಟ್ಟಡವನ್ನು ಹೊಂದಿದ್ದು ಇದರ ಜೀರ್ಣೋದ್ಧಾರವಾಗಿದೆ. ದೇವಾಲಯದಲ್ಲಿ ದೇವತೆಯರ 3 ವಿಗ್ರಹಗಳಿವೆ. ಈ ವಿಗ್ರಹಗಳ ಮುಂಭಾಗದಲ್ಲಿ ಸರ್ಪ, ಮಾತೃಕೆಯರ ಶಿಲ್ಪವಿದ್ದು, ದೇವಾಲಯದ ಒಳಭಾಗದಲ್ಲಿ ಜೋಡಿ ವಿಗ್ರಹ ಕುದುರೆಯ ಮೇಲೆ ಕುಳಿತ ದೃಶ್ಯವನ್ನು ಕೆತ್ತಲಾಗಿದೆ. ಇದು ಮೈಲಾರ ದೇವರೆಂದು ಊಹಿಸಬಹುದಾಗಿದೆ.

ಕಾಡುಗಲ್ಲು ಮಿಶ್ರಿತವಾದ ಈ ದೇವಾಲಯದ ಮುಂಭಾಗದ ಶಾಸನವೊಂದರಲ್ಲಿ ಉಚ್ಚಂಗಿ ದೇವಿಯ ಹಾಗೂ ಉಚ್ಚಂಗಿ ಮೂಲಸ್ಥಾನದ ಉಲ್ಲೇಖಗಳು ಕಂಡುಬರುತ್ತವೆ.[1] ಈ ದೇವಾಲಯದ ರೂಪರೇಷೆಗಳನ್ನು ಗಮನಿಸುವುದರಿಂದ ಇದು 10ನೇ ಶತಮಾನದ ಪೂರ್ವ ಭಾಗದಲ್ಲಿ ನಿರ್ಮಾಣಗೊಂಡಿರಬಹುದಾಗಿದೆ.

<u>ತವಕ್ಲೇಶ್ವರ ದೇವಾಲಯ:</u>

ಉಚ್ಚಂಗಿಯ ಆಗ್ನೇಯ ದಿಕ್ಕಿನಲ್ಲಿ ಪೂರ್ವಾಭಿಮುಖವಾಗಿ ಹೊಲದಲ್ಲಿರುವುದೇ ತವಕ್ಲೇಶ್ವರ ದೇವಾಲಯ. ಇದರ ಸುತ್ತಲೂ ಬಯಲಿದ್ದು ಬೆಳೆಯನ್ನು ಬೆಳೆಯುವ ಹೊಲಗಳಿವೆ. ಈ ದೇವಾಲಯವು ಪೂರ್ವ ಮತ್ತು ಪಶ್ಚಿಮವಾಗಿ ಸುಮಾರು 50 ಅಡಿ ಉದ್ದವಿದ್ದು, ಉತ್ತರ ಮತ್ತು ದಕ್ಷಿಣವಾಗಿ ಸು. 30 ಅಡಿ ಅಗಲವಾಗಿದೆ. ಇದು ಗರ್ಭಗೃಹ, ಅಂತರಾಳ, ನವರಂಗವನ್ನು ಹೊಂದಿದ್ದು, ಗರ್ಭಗೃಹದ ಮುಚ್ಚಳಿಕೆ ಪದ್ಮವನ್ನು ಹೋಲುತ್ತದೆ. ಇದರ ಮಧ್ಯಭಾಗದಲ್ಲಿರುವ ಲಿಂಗವು 1½ ಅಡಿ ಎತ್ತರವಿದ್ದು, ಕಾಡು ಶಿಲೆಯಿಂದ ನಿರ್ಮಾಣಗೊಂಡಿರಬಹುದಾದ ಇದು ಬ್ರಹ್ಮ ಸೂತ್ರವನ್ನು ಹೊಂದಿಲ್ಲ. ಗರ್ಭಗೃಹದ ಮುಂಭಾಗವೇ ಅಂತರಾಳ, ಇದು ಕಮಲಾಕೃತಿಯ ಮುಚ್ಚಳಿಕೆಯನ್ನು ಹೊಂದಿದೆ. ಇದರ ಬಾಗಿಲವಾಡದ ಮೇಲೆ ಗಜಲಕ್ಷ್ಮಿಯನ್ನು ಕೆತ್ತಲಾಗಿದ್ದು ಇದರ ಎರಡೂ ಪಾರ್ಶ್ವಗಳಲ್ಲಿ ಆಳೆತ್ತರದ ಶೈವ ಪಂಥದ ಎರಡು ಶಿಲ್ಪಗಳನ್ನು ಕೆತ್ತಲಾಗಿದೆ. ಇವುಗಳ ಮುಂಭಾಗವೇ ನವರಂಗ. ಇದು ವಿಶಾಲವಾಗಿದ್ದು, ಸು. 10X10 ಚದುರಡಿಯ ಒಂದೇ ಕಲ್ಲಿನ ಚಪ್ಪಡಿಯನ್ನು ಹಾಸಲಾಗಿದೆ. ಈ ದೇವಾಲಯಕ್ಕೆ 3 ಮುಖದಲ್ಲಿ ಬಾಗಿಲುಗಳಿದ್ದ ಕುರುಹುಗಳಿದ್ದು, ಇದು ಸುಮಾರು 20 ಕಂಬಗಳನ್ನು ಹೊಂದಿದ್ದು ಇದರಲ್ಲಿ ಬಳಪದ ಕಲ್ಲಿನ ಉಪಯೋಗ ಮಾಡಿರುವುದು ಕಂಡುಬರುತ್ತದೆ.

ಈ ದೇವಾಲಯದ ಬಲಬದಿಯಲ್ಲಿರುವ ಶಾಸನದಲ್ಲಿ ಇದಕ್ಕೆ 'ಗಳಗೇಶ್ವರ ದೇವಾಲಯ' ಎಂದು ಕರೆದಿದೆ.[2] ಈ ದೇವಾಲಯದ ಲಕ್ಷಣಗಳು ಮತ್ತು ಶಾಸನದ ಹೇಳಿಕೆಯಂತೆ ಕಲ್ಯಾಣ ಚಾಳುಕ್ಯರ ಕಾಲದಲ್ಲಿ ನಿರ್ಮಾಣವಾಗಿದ್ದಿರಬಹುದಾದ ಇದು ಕಾಲಾಂತರದಲ್ಲಿ ತಥಕ್ಲೇಶ್ವರವಾಗಿ ಪರಿವರ್ತನೆಯಾಗಿರಬಹುದೆಂದು ಊಹಿಸಲಾಗಿದೆ.

ಕೆಳಕೋಟೆ ಆಂಜನೇಯ :

ಉಚ್ಚಂಗಿ ದುರ್ಗದಲ್ಲಿರುವ ವೀರಭದ್ರ ದೇವಸ್ಥಾನದ ಪೂರ್ವಕ್ಕೆ ದಕ್ಷಿಣದಿಕ್ಕಿಗೆ ಮುಖ ಮಾಡಿ ನಿಂತಿರುವ ದೇವಾಲಯವೇ ಕೆಳಕೋಟೆ ಆಂಜನೇಯ. ಗರ್ಭಗೃಹ, ನವರಂಗವನ್ನು ಹೊಂದಿರುವ ಇದು ಸು. 6 ಅಡಿ ಎತ್ತರದ ಆಂಜನೇಯ ಮೂರ್ತಿ ಇದ್ದು, ನವರಂಗದಲ್ಲಿ 6 ಕಂಬಗಳನ್ನೊಳಗೊಂಡಿದೆ. ಜೀರ್ಣೋದ್ಧಾರವಾಗಿರುವ ಇದು ವಿಶಾಲವಾದ ಪೌಳಿಯನ್ನು ಹೊಂದಿದೆ, ಪೌಳಿಯಲ್ಲಿ ಹಳೆಯದೆನ್ನಲಾಗುವ ಕಂಬಗಳು ವಿಗ್ರಹ, ಶಿಲೆಗಳೂ ಸೇರಿವೆ. ದೇವಾಲಯದ ಮುಂಭಾಗದಲ್ಲಿ 10 ಅಡಿ ಎತ್ತರದ ದೀಪ ಸ್ತಂಭವಿದೆ. ಈ ದೇವಾಲಯದ ಹಿಂಭಾಗ ಸ್ವಲ್ಪ ದೂರದಲ್ಲಿ ಬನಶಂಕರಿ ದೇವಾಲಯ ಅರಸನ ಬಾವಿಗಳಿವೆ. ಪಶ್ಚಿಮ ದಿಕ್ಕಿಗೆ ಬಸವಣ್ಣ ದೇವಸ್ಥಾನವಿದೆ. ಇದು ಹೊಯ್ಸಳ ಶೈಲಿಯನ್ನು ಹೊಂದಿರುವುದು. ಆದರೆ ಆಂಜನೇಯ ದೇವಾಲಯವು ಇತ್ತೀಚಿನ ಕಟ್ಟಡವಾಗಿರುವಂತೆ ತೋರುತ್ತದೆ.

ಬಸವಣ್ಣ ದೇವಾಲಯ :

ಕೆಳಗೋಟೆ ಆಂಜನೇಯನ ಗುಡಿಯ ಪಕ್ಕದಲ್ಲಿರುವುದೇ ಬಸವಣ್ಣ ದೇವಾಲಯ. ದಕ್ಷಿಣಾಭಿಮುಖವಾಗಿರುವ ಇದು ಗರ್ಭಗುಡಿಯನ್ನು ಮಾತ್ರ ಉಳಿಸಿಕೊಂಡಿದೆ. ಇದರ ಮಧ್ಯಭಾಗದಲ್ಲಿ ಪೀಠವಿದ್ದು ಇದರ ಪಕ್ಕದಲ್ಲಿ ಬಸವಣ್ಣನ ವಿಗ್ರಹವಿದೆ. ಸು. 6×6 ಚದುರತೆಯನ್ನು ಹೊಂದಿರುವ ಈ ದೇವಾಲಯದ ಹೊರ ಮುಖಬಾಗಿಲವಾಡವು ಸುಂದರ ಕೆತ್ತನೆಯ ಮೂರು ಹಂತಗಳನ್ನು ಹೊಂದಿದೆ. ಇದರ ಮೇಲ್ಭಾಗದಲ್ಲಿ ಗಜಲಕ್ಷ್ಮಿ ವಿಗ್ರಹ ಕೆತ್ತಿದ್ದರೆ, ಬಾಗಿಲುವಾಡ ಪಾರ್ಶ್ವಗಳಲ್ಲಿ, ಎರಡೆರಡು ಶಿಲ್ಪಗಳನ್ನು ಕೆತ್ತಲಾಗಿದೆ. ಅವು ಬಾಗಿಲುವಾಡದಲ್ಲಿಯೇ ಸೇರಿದ್ದು ಸು. 2 ಅಡಿ ಎತ್ತರವಾಗಿವೆ. ಇದೊಂದು ಶಿಥಿಲ ದೇವಾಲಯವಾಗಿದ್ದು, ಮುಂದೆ ಅಂತರಾಳ, ನವರಂಗ, ಇತ್ಯಾದಿ ಇದ್ದಿರಬಹುದಾದ ಕುರುಹುಗಳು ಕಂಡುಬರುತ್ತವೆ. ಈ ದೇವಾಲಯದ ಕೆತ್ತನೆ ಮತ್ತು ಲಕ್ಷಣಗಳಿಂದ ಇದು 13ನೇ ಶತಮಾನಕ್ಕೆ ಸೇರಿದ್ದಿರಬಹುದಾಗಿದೆ.

## ವೀರಭದ್ರ ದೇವಾಲಯ :

ಉಚ್ಚಂಗಿ ದುರ್ಗದಿಂದ ದಾವಣಗೇರಿಗೆ ಹೋಗುವ ರಸ್ತೆಯ ಎಡ ಬದಿಯಲ್ಲಿ ಈ ದೇವಾಲಯವಿದೆ. ಪೂರ್ವದ ಕಡೆ ಮುಖ ಮಾಡಿರುವ ಈ ದೇವಾಲಯವು ಗರ್ಭಗೃಹ, ಹಾಗೂ ಸಭಾ ಮಂಟಪವನ್ನು ಮಾತ್ರ ಹೊಂದಿದೆ. ಇದು ಸು.30 ಅಡಿ ಉದ್ದ, ಹಾಗೂ 10 ಅಡಿ ಅಗಲವಾಗಿದೆ. ಗರ್ಭಗೃಹದಲ್ಲಿ ವೀರಭದ್ರನ ಮತ್ತು ಗಣೇಶನ ವಿಗ್ರಹಗಳಿವೆ. ಜೀರ್ಣೋದ್ಧಾರ ಕಾರ್ಯ ನಡೆದಿದ್ದು ಮೊದಲಿನ ರೂಪ ಮಾರ್ಪಾಟಾಗಿದೆ. ಸುತ್ತಲೂ ಪಾಳಿಯಿದ್ದು ದೇವಸ್ಥಾನವು ಎತ್ತರ ಭಾಗದಲ್ಲಿದೆ. ವೀರಭದ್ರ ವಿಗ್ರಹವನ್ನು ಹೊಯ್ಸಳರ ಶಾಸನವೊಂದರಲ್ಲಿ ಕೆತ್ತಿದಂತೆ ಕಂಡುಬರುತ್ತದೆ. ಇದು ಪಾಳೇಗಾರರ ಕಾಲದಲ್ಲಿ ನಿರ್ಮಾಣಗೊಂಡಿರಬಹುದು. ಈ ದೇವಾಲಯದ ಮುಂದಿರುವ ಶಾಸನದಲ್ಲಿ ಅಕ್ಷರಗಳೇ ಅಳಿಸಿಹೋಗಿವೆ. ಈ ದೇವಾಲಯದ ಹೊರಭಾಗದಲ್ಲಿ ಸಪ್ತ ಮಾತೃಕೆಯರ ಮತ್ತು ಪಾಳಿಯ ಗೋಡೆಗೆ ಮಹಾಸತಿ ಕಲ್ಲೊಂದು ನಿಲ್ಲಿಸಿರುವುದು ಕಂಡುಬರುತ್ತದೆ.

## ನೊಣ್ಣಿಶ್ವರ ದೇವಾಲಯ :

ಉಚ್ಚಂಗಿ ದುರ್ಗದ ಹಳೆಯ ದೇವಾಲಯಗಳಲ್ಲಿ ನೊಣ್ಣಿಶ್ವರ ಗುಡಿಯು ಮುಖ್ಯವಾದುದು. ಇದು ಉಚ್ಚಂಗಿದುರ್ಗ ದಕ್ಷಿಣಭಾಗದ ಚಿಕ್ಕ ಹೊಂಡದ ಪೂರ್ವಕ್ಕೆ ಇದ್ದು ಪಶ್ಚಿಮ ದಿಕ್ಕಿನ ಕಡೆ ಮುಖ ಮಾಡಿದೆ. ಈ ದೇವಾಲಯವು ಹೊಯ್ಸಳರ ಕಾಲದಾಗಿದ್ದು ದೇವಾಲಯದ ಬಳಿ ಇರುವ ವೀರಗಲ್ಲು ಶಾಸನದಲ್ಲಿ 1207 ಎಂದು ಮತ್ತು ದುರ್ಗಾಧಿಪತಿ ಬೊಂಕಿದೇವರ ವಿಷಯ ತಿಳಿಯುವುದರಿಂದ ಈ ಅವಧಿಯಲ್ಲಿ ನಿರ್ಮಾಣಗೊಂಡಿರಬಹುದು.

ಇಂದು ಮೂಲ ದೇವಾಲಯ ಶಿಥಿಲವಾದುದು ಕಂಡುಬರುತ್ತದೆ. ದೇವಾಲಯದ ಅಧಿಷ್ಠಾನವು ಮಣ್ಣಿನಲ್ಲಿ ಅಡಗಿದೆ. ಗರ್ಭಗುಡಿಯ ಒಳಭಾಗದ ವೃತ್ತಾಕಾರದಲ್ಲಿ ಲಿಂಗವು ಮಧ್ಯಕ್ಕೆ ಇದು ಅಂತರಾಳದಲ್ಲಿ ಎರಡು ಕಡೆ ಗಣಪತಿಗಳಿವೆ. ಲಿಂಗದ ಮುಂದಿನ ನವರಂಗದ ಭಾಗ ಪೂರ್ಣ ಬಿದ್ದು ಹೋಗಿದೆ. ಲಿಂಗದ ನೀರಿನ ಹರಿಯುವಿಕೆ ಉತ್ತರದ ಕಡೆ ಇದೆ. ಲಿಂಗವು ಸು.1ಅಡಿ ಎತ್ತರವಿದೆ. ಗರ್ಭಗುಡಿಯ ಮುಚ್ಚಳಿಕೆಯಲ್ಲಿ ಕಮಲ ಕೆತ್ತನೆ ಮಾಡಿದ್ದಾರೆ. ಗರ್ಭಗುಡಿ ಸು.6×6 ಚದುರ ಅಡಿ ಇದೆ. ಗರ್ಭಗೃಹದ ಬಾಗಿಲ ಮೇಲೆ ಗಜಲಕ್ಷ್ಮಿ ಇದೆ.

ಅಂತರಾಳವು ಗರ್ಭಗುಡಿಯಷ್ಟೇ ವಿಸ್ತೀರ್ಣ ಹೊಂದಿದೆ. ಅಂತರಾಳದ ಮುಚ್ಚಿಗೆಯಲ್ಲಿ ಕಮಲದ ಕೆತ್ತನೆ ಮಾಡಿದ್ದಾರೆ. ಅಂತರಾಳ ಗರ್ಭಗುಡಿ ಮಾತ್ರ ಇವೆ. ಅಂತರಾಳದ ಬಾಗಿಲ ಮೇಲೆ ಇರುವ ಚಿತ್ರಗಳ, ಹೊಯ್ಸಳ ಕಲೆಯ ಶೈಲಿಯನ್ನು ಹೊಂದಿದೆ. ಸಿಂಹದ ಆಕೃತಿಯ ಸ್ಪಷ್ಟವಾಗಿ ಗಮನಿಸಬಹುದು. ಕೆತ್ತನೆ ಸುಂದರವಾಗಿ ಮಾಡಿವೆ. ಅಂತರಾಳದ ಬಾಗಿಲದ ಎತ್ತರ ಸು. 5 ಅಡಿ ಇದೆ. ಗರ್ಭಗುಡಿಯ ಹೊರಭಾಗ ನಕ್ಷತ್ರ ಆಕಾರ ಹೊಂದಿದ್ದು, ಉತ್ತರ, ಪೂರ್ವ, ಮತ್ತು ದಕ್ಷಿಣಕ್ಕೆ ಮೂರು ದೇವರ ಕೋಷ್ಠಗಳಿವೆ. ಅವುಗಳ ಮುಂದೆ ದ್ವಾರಪಾಲಕರು ಇದ್ದಾರೆ. ಕೋಷ್ಠಗಳು ತುಂಬಾ ಸುಂದರವಾಗಿಯೇ ಉಳಿದಿವೆ. ದೇವಾಲಯದ ಎಡಬದಿಯಲ್ಲಿ ಒಡೆದ ಕಂಬಗಳ ಶಿಲ್ಪಗಳು ಬಿದ್ದಿವೆ. ಅಲ್ಲಿಯೇ ಶಿಲಾಬಾಲಿಕೆಯ ಶಿಲ್ಪವೊಂದಿದೆ. ಎರಡು ವೀರಗಲ್ಲು 3 ಶಾಸನಗಳು ಅಲ್ಲಿ ದೊರೆಯುತ್ತವೆ. ಶಿಲ್ಪಗಳನ್ನು ಗುರುತಿಸಿದಾಗ ಸ್ಪಷ್ಟ ಕುಸುರಿ ಕೆಲಸ ನಡೆದಿದೆ. ಆದ್ದರಿಂದ ಹೊಯ್ಸಳರ ಕಾಲದಲ್ಲಿ ಈ ದೇವಾಲಯ ನಿರ್ಮಿಸಿರಬಹುದೆಂದು ಊಹಿಸಬಹುದಾಗಿದೆ.

ಜೈನ ದೇವಾಲಯ :

ಉಚ್ಚಂಗಿ ದುರ್ಗದ ನೈರುತ್ಯ ದಿಕ್ಕಿಗೆ ಸಿಗೇ ಹೊಂಡದ ಉತ್ತರಕ್ಕಿರುವ ದೇವಾಲಯವೇ ಜೈನ ದೇವಾಲಯ. ದೇವಾಲಯ ತುಂಬ ಹಳೆಯದೇನು ಅಲ್ಲದ ಇದು ಪೂರ್ವಕ್ಕೆ ಮುಖ ಮಾಡಿದ್ದು. ಗರ್ಭಗೃಹ ನವರಂಗವನ್ನು ಹೊಂದಿದೆ. ಗರ್ಭಗೃಹ ಸು.5 ಅಡಿ ಎತ್ತರವಿದ್ದು ಇಲ್ಲಿ 'ಜೈನ ತೀರ್ಥಂಕರನ ವಿಗ್ರಹವಿದೆ. ಇದು ಪದ್ಮಾಸನ ಹಾಕಿ ಕುಳಿತಿರುವ ಸು.4 ಅಡಿಯ ಎತ್ತರವಿದ್ದು ಮೂರ್ತಿ ಒಡೆದಿದೆ. ನವರಂಗಕ್ಕೆ 8X8 ಅಡಿ ಅಳತೆಯ ಶಿಲೆಯನ್ನು ಹಾಸಲಾಗಿದೆ. ಇದರ ಮೇಲ್ಭಾಗದಲ್ಲಿ ಪದ್ಮ ಮುಚ್ಚಳಿಕೆ ಇದೆ. ದೇವಾಲಯದಲ್ಲಿ ಅಲಂಕೃತ ಗೂಡುಗಳಿವೆ. ಗ್ರಾನೈಟ ಕಲ್ಲಿನಿಂದ ನಿರ್ಮಿಸಲ್ಪಟ್ಟಿದ್ದು ಜೀರ್ಣೋದ್ಧಾರವಾಗಿದೆ. ದೇವಾಲಯದಿಂದ 20 ಮೀಟರ ಮುಂದೆ ಒಂದು ಮಂಟಪ ಇರುವುದು ಕಂಡುಬರುತ್ತದೆ. ದೇವಾಲಯವು ಇತ್ತೀಚಿನದಾದರು ಮೂರ್ತಿ ಸು. 10 ಶತಮಾನಕ್ಕೆ ಸೇರಿದ್ದಿರಬಹುದಾಗಿದೆ.

ಶಿವ ದೇವಾಲಯ :

ಉಚ್ಚಂಗಿ ದುರ್ಗದ ನೈರುತ್ಯದ ಚಿಕ್ಕ ಹೊಂಡದ ಉತ್ತರಕ್ಕಿರುವುದೇ ಶಿವ ದೇವಾಲಯ. ಪೂರ್ವಾಭಿಮುಖವಾಗಿರುವ ಈ ದೇವಾಲಯವು ಸು. 5 5 ಅಡಿ ಉದ್ದಗಲವಿರುವ ಇದು 6 ಅಡಿ ಎತ್ತರವಾಗಿದೆ. ಲಿಂಗ ಹಳೆಯವಾದರು ಕಟ್ಟಡ ಹೊಸದಾಗಿದೆ. ಇದರ ಬಲ ಭಗಗದಲ್ಲಿ ಶಾಸನವೂ ಇದೆ. ಅದರಲ್ಲಿ ನಭೇಶ್ವರ ದೇವಾಲಯವೆಂದು ಕರೆದಿದೆ. ಇದು ಕಲ್ಯಾಣ ಚಾಳುಕ್ಯರ ಕಾಲದಿದ್ದಿರಬಹುದಾದುದು ಶಾಸನದಿಂದ ವ್ಯಕ್ತವಾಗುತ್ತದೆ.[5] ಈ ದೇವಾಲಯವು ಬಹು ದೊಡ್ಡ ಕಟ್ಟಡ ಹೊಂದಿರಬಹುದಾದುದಕ್ಕೆ ಕುರುಹುಗಳು ಕಂಡು ಬರುತ್ತವೆ.

ಹಿರೇ ಹೊಂಡದ ಉತ್ತರ ದಿಕ್ಕಿನ ದೇವಾಲಯ :

ಈ ದೇವಾಲಯವು ಪೂರ್ವಕ್ಕೆ ಮುಖ ಮಾಡಿದ್ದು, ಗರ್ಭಗೃಹ ಮಾತ್ರ ಉಳಿದಿದ್ದು ಅಧಿಷ್ಠಾನ ಇತ್ಯಾದಿ ಬಿದ್ದಿರುವ ಅವಶೇಷಗಳು ಕಂಡುಬರುವುವು. ಇದು ಪೂರ್ಣ ಶಿಥಿಲವಾಗಿದೆ. ಇದರ ಮುಂದೆ ಅಂತರಾಳ, ನವರಂಗ ಇದ್ದಿರ ಬಹುದಾದ ಕುರುಹುಗಳಿವೆ. ಬಹುಶ: ಇದು ಪ್ರಾಚೀನ ದೇವಾಲಯಗಳಲ್ಲೊಂದಾಗಿರಬಹುದಾಗಿದೆ.

ರಾಮಲಿಂಗೇಶ್ವರ ದೇವಾಲಯ :

ಉಚ್ಚಂಗಿ ದುರ್ಗದ ಪಶ್ಚಿಮ ದಿಕ್ಕಿನ ಕಡೆ ಹರಿಹರದ ಬಾಗಿಲ ದಕ್ಷಿಣಕ್ಕೆ ಇರುವುದೇ ರಾಮಲಿಂಗೇಶ್ವರ ದೇವಾಲಯ. ಇದು ಗುಡ್ಡದ ಮೇಲೆ ಉತ್ತರಕ್ಕೆ ಮುಖ ಮಾಡಿ ಕೊಂಡಿದೆ. 15X6 ಉದ್ದಗಲವನ್ನು ಹೊಂದಿದ ಇದು ಜೀರ್ಣೋದ್ಧಾರ ಕಂಡಿದೆ. ಲಿಂಗವು ಕಲ್ಯಾಣ ಚಾಳುಕ್ಯರದೆನ್ನಬಹುದಾದರೂ ಕಟ್ಟಡ ಪಾಳೇಗಾರರದ್ದಾಗಿರಬಹುದು. ಗರ್ಭಗೃಹ ಮತ್ತು ಅದರ ಮುಂದೆ ಸಣ್ಣ ಸಭಾಮಂಟಪ ಇದ್ದು ಇದು ಸರಳ ಶೈಲಿಯಲ್ಲಿದೆ. ಒಳಗಡೆ ಕೃಷ್ಣನ ವಿಗ್ರಹ, ನಾಗರ ಕಲ್ಲುಗಳು, ಲಿಂಗ ಅದರ ಮುಂಭಾಗದಲ್ಲಿ ಬಸವಣ್ಣ ಇದೆ.

## ಬಸವಣ್ಣ ದೇವಾಲಯ :

ಉಚ್ಚಂಗಿ ದುರ್ಗದ ಕೋಟೆಯ ಮೂರನೇ ಬಾಗಿಲುವಾಡದ ಹಿಂಬದಿಯಲ್ಲಿರುವುದೇ ಬಸವಣ್ಣ ದೇವಾಲಯ. ಇದು ಚಿಕ್ಕದಾದ ದೇವಸ್ಥಾನವಾಗಿದ್ದು ಕೋಟೆ ಗೋಡೆಗೆ ಒರಗಿಕೊಂಡಿದೆ. ಇದರ ಬಾಗಿಲು ೩ ಚೌಕಟ್ಟುಗಳು ಆ ದೇವಸ್ಥಾನದ ಹಿನ್ನೆಲೆಯನ್ನು ತಿಳಿಸಬಹುದಾಗಿದೆ. ತುಂಬು ಕೆತ್ತನೆಯ ಬಾಗಿಲುಗಳು ಮಾತ್ರ ಉಳಿದಿದ್ದು ದೇವಾಲಯ ಶಿಥಿಲಗೊಂಡಿದೆ. ಇದರ ಬಲ ಪಾರ್ಶ್ವದ ಕೋಟೆ ಗೋಡೆಯಲ್ಲಿ ಇದರ ಭಾಗಗಳನ್ನು ಹಾಕಿದಂತೆ ಭಾಸವಾಗುತ್ತದೆ.

## ವಿರೂಪಾಕ್ಷ ದೇವಾಲಯ :

ಉಚ್ಚಂಗಿ ದುರ್ಗದ ಬೆಟ್ಟದ ಮೇಲಿರುವ ರಾಣಿ ಅರಮನೆಯಿಂದ ಕೆಳಗಿಳಿಯುವ ಮಾರ್ಗ ಮಧ್ಯದ ಬಟ್ಟಲ ಬಾವಿಯ ಬಲ ಬದಿಯಲ್ಲಿರುವುದೇ ವಿರುಪಾಕ್ಷ ದೇವಾಲಯ. ಹಳೆಯ ದೇವಾಲಯಗಳಲ್ಲಿ ಇದು ಒಂದು. ಇದರ ಮುಂಭಾಗದಲ್ಲಿ ಗೌರಿಸಪ್ಪಿನ ಗಿಡಗಳು ದೊಡ್ಡ ಪ್ರಮಾಣದಲ್ಲಿವೆ. ಹಿಂಬದಿಯಲ್ಲಿ ಕೋಟೆಯ ಚೌಡಮ್ಮನ ಬಾಗಿಲು ಬರುವುದು. ಬಲ ಬದಿಯಲ್ಲಿ ಕೋಟೆಯ ಗೋಡೆ ಇದೆ. ಈ ದೇವಾಲಯವು ಗರ್ಭಗುಡಿ, ಅಂತರಾಳ, ನವರಂಗವನ್ನು ಹೊಂದಿದ್ದು. ಅಂತರಾಳದ ಬಾಗಿಲ ಮೇಲ್ಭಾಗದಲ್ಲಿ ಗಜಲಕ್ಷ್ಮಿ, ನವರಂಗದಲ್ಲಿ ಗೋಡೆಯ ಕಂಬಗಳು ಸೇರಿದಂತೆ 12 ಕಂಬಗಳಿದ್ದು, ಈ ದೇವಾಲಯವು ಪೂರ್ವಕ್ಕೆ ಮುಖ ಮಾಡಿದ್ದು ಜೀರ್ಣೋದ್ಧಾರ ಮಾಡಲ್ಪಟ್ಟಿದೆ. ಇದು ನರಸಿಂಹ ದೇವಾಲಯವಿರಬೇಕು. ಏಕೆಂದರೆ ವಿರೂಪಾಕ್ಷ ದೇವರೆಂದು ಹೇಳಲ್ಪಟ್ಟಿರುವ ಲಿಂಗದ ಕೆಳಭಾಗದ ಪೀಠ ಬದಲಾಗಿರುವುದು ಕಂಡುಬರುತ್ತದೆ. ಪೀಠಕ್ಕೆ ಲಿಂಗಕ್ಕೆ ಸಂಬಂಧಗಳು ಕೂಡುವುದಿಲ್ಲ. ಮತ್ತು ದೇವಾಲಯದ ಎಡಭಾಗದ ಬಟ್ಟಲ ಬಾವಿಯ ಮೇಲ್ಭಾಗದಲ್ಲಿ ಬಂಡೆ ಶಾಸನವೊಂದಿದೆ. ಅದರಲ್ಲಿ ವಿಜಯಪಾಂಡ್ಯ ದೇವರು ನರಸಿಂಹ ದೇವರಿಗೆ ದಾನ ಬಿಟ್ಟ ಉಲ್ಲೇಖಗಳು ಇವೆ.[4] ಮತ್ತು ದೇವಾಲಯ ಹಳೆಯದಾದ ಮತ್ತು ಕಲ್ಯಾಣ ಚಾಲುಕ್ಯರ ದೇವಾಲಯದ ಲಕ್ಷಣಗಳನ್ನು ಹೊಂದಿರುವುದರಿಂದ 12 ಅಥವಾ 13ನೇ ಶತಮಾನದ ದೇವಾಲಯವಾಗಿದೆ. ಕಂಬಗಳು, ಫಲಕ, ಮುಚ್ಚಳ, ಬೋದಿಗೆ ಲಕ್ಷಣಗಳನ್ನು ಹೊಂದಿರುವುದು ಕಂಡುಬರುತ್ತದೆ.

ಉಚ್ಚಂಗೆಮ್ಮನ ದೇವಾಲಯ :

ಉಚ್ಚಂಗಿ ದುರ್ಗದ ತುಟ್ಟ ತುದಿಯಲ್ಲಿರುವುದೇ ಉಚ್ಚಂಗೆಮ್ಮನ ದೇವಾಲಯ. ಇದರ ಜೀರ್ಣೋದ್ಧಾರವಾಗಿದೆ. ಈ ದೇವಾಲಯದ ದಕ್ಷಿಣಕ್ಕೆ ಮೆಟ್ಟಿಲುಗಳು ಸಿಬಾರ ಅರ್ಚಕರ ಮನೆಗಳಿವೆ. ಪೂರ್ವಕ್ಕೆ ಕಡಿದಾದ ಬೆಟ್ಟ ಕೆಳಗೆ ಊರು ಇದೆ. ಉತ್ತರಕ್ಕೆ ಇಳಿಜಾರು ಬೆಟ್ಟ, ತುರಬಿನ ಕಲ್ಲುಇದೆ. ಪಶ್ಚಿಮಕ್ಕೆ ಕಡಿದಾದ ಬೆಟ್ಟ ಇದೆ. ಗರ್ಭಗೃಹ, ಅಂತರಾಳ, ನವರಂಗ, ಹೊಂದಿದ್ದು ದೇವಾಲಯದ ಸುತ್ತಲೂ ಪ್ರದಕ್ಷಿಣ ಪಥದ ವಿಶಾಲ ಆವರಣ, ಮತ್ತು ಪಾಳಿಯನ್ನು ಹೊಂದಿದೆ. ಸಾದಾ ಕಂಬಗಳಿರುವ ಈ ದೇವಾಲಯ ದಕ್ಷಿಣ ಭಾಗಕ್ಕೆ ಅಂಟಿಕೊಂಡ ಹೊಸ ಕಟ್ಟಡದ ವಿಸ್ತರಣೆಯಾಗಿದೆ. ಕೆಳ ಭಾಗದಲ್ಲಿ ವೀರಗಲ್ಲು ಶಾಸನವಿದೆ. ಇದರ ಮುಂಭಾಗದಲ್ಲಿ ಪ್ರವೇಶ ದ್ವಾರದ ಕಟ್ಟಡವು ಇದೆ. ದೇವಾಲಯದ ಗರ್ಭಗುಡಿಗೆ ಅಂಟಿಕೊಂಡ ದಕ್ಷಿಣ ಭಾಗದಲ್ಲಿ ಸಣ್ಣದೊಂದು ಗರ್ಭಗೃಹ ಇದೆ. ಅದರಲ್ಲಿ 4 ಅಡಿ ಎತ್ತರದ 2 ಶಿಲ್ಪಗಳಿವೆ. ದೇವಾಲಯದ ಬಲ ಬದಿಯಲ್ಲಿ ಎರಡು ಚಿಕ್ಕ ದೇವಾಲಯಗಳು ಪಾಳಿಗೆ ಅಂಟಿಕೊಂಡಿವೆ. ಅವುಗಳಲ್ಲಿ ಕಣ್ಣ ಕೋಷ್ಟಮ್ಮ, ಮಾರಣಮ್ಮ,ಮಾತಂಗಮ್ಮ ಎನ್ನುವ ಹಳೆಯ ದೇವಿಯ ಮೂರ್ತಿಗಳಿವೆ.

ಕಣ್ಣ ನೋವು ಬಂದವರು ಇಲ್ಲಿ ಬೇಡಿಕೊಂಡರೆ ಕಣ್ಣು ನೋವು ಸರಿಯಾಗುತ್ತದೆ ಎಂಬ ಪ್ರತೀತಿ ಇದೆ. ಮಾತಂಗೆಮ್ಮನಿಗೆ ಮಾಂಸದ ನೈವೇದ್ಯವಾಗುತ್ತದೆ. ಮುಖ್ಯ ದೇವಾಲಯದ ದಕ್ಷಿಣದ ಪ್ರದೇಶದ ಪ್ರವೇಶ ದ್ವಾರದ ಎಡಭಾಗಕ್ಕೆ ಶಾಸನವಿದೆ. ಅದರಲ್ಲಿ ಕ್ರಿ.ಶ. 1530 ರಲ್ಲಿನ ರಾಮರಾಜನು ದಾನ ಬಿಟ್ಟ ಮತ್ತು ಉಚ್ಚಂಗಿಯ ದೇವತೆಯ ಉಲ್ಲೇಖವಿದೆ. ಉಚ್ಚಂಗಿ ದೇವಿಯ ಗರ್ಭಗೃಹದಲ್ಲಿ ಕಾಳಿಕಾದೇವಿಯೆಂದು ಕರೆಯಲ್ಪಡುವ ಮೂರ್ತಿಯುದ್ದು ಹಳೆಯದಾದ ಪೀಠವಿದೆ. ಅದರ ಮೇಲೆ ಆಸೀನಳಾದ ದೇವಿ 4 ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ, ಜಟಾ ಮುಕುಟ ಮೂರ್ತಿಯಾಗಿದ್ದು 4 ಅಡಿ ಎತ್ತರವಾಗಿದೆ. ಈ ವಿಗ್ರಹದ ಪಕ್ಕದಲ್ಲಿಯೇ ಪರುಶರಾಮನೆಂದು ಕರೆಯಲ್ಪಡುವ ವಿಗ್ರಹವೂ ಇದೆ. ಯಾವಾಗಲೂ ಬಟ್ಟೆ ಕಟ್ಟಿರುತ್ತಾರೆ. ಎರಡು ಲೋಹದ ಹಳೆಯ ವಿಗ್ರಹಗಳಿವೆ. ಇವು ಅಂಜನೆಯನ ಗುಡಿಯ ಬಳಿ ಮಣ್ಣನ್ನು ಅಗೆಯುವಾಗ ದೊರೆತವೆಂದು ಅವನ್ನು ಮೇಲೆ ಉಚ್ಚಂಗೆಮ್ಮನ ಗುಡಿಯಲ್ಲಿ ಇಡಲಾಗಿದೆ ಎಂದು ಹಿರಿಯರು ಅಭಿಪ್ರಾಯಪಡುತ್ತಾರೆ. ಉತ್ಸವಾಂಭ ವಿಗ್ರಹ ಮುಕ್ಕಾಲು ಅಡಿ ಎತ್ತರವಿದ್ದು 4 ಕೈಗಳು,

ಡಮರು, ತ್ರಿಶೂಲ, ಖಡ್ಗ, ಹೊಂದಿದ್ದು ಹಲಗೆಯ ಗದ್ದುಗೆಯ ಮೇಲಿದೆ ಮತ್ತು, ಪಕ್ಕದಲ್ಲಿ ಚೌಡಿಕೆ ಇದೆ. ಗರ್ಭಗುಡಿಯ ಮೇಲೆ ಶಿಖರದಲ್ಲಿ ಶಾಸನವನ್ನು ಕೆತ್ತಲ್ಪಟ್ಟಿದೆ.

ಕರಡಿದುರ್ಗದ ಆಂಜನೇಯ ದೇವಾಲಯ :

ಉಚ್ಚಂಗಿ ದುರ್ಗದ ನೈರುತ್ಯ ದಿಕ್ಕಿಗೆ ಸುಮಾರು 3 ಕಿ.ಮೀ. ದೂರದ ಕರಡಿದುರ್ಗದ ಒಳಗಿರುವುದೇ ಆಂಜನೇಯ ದೇವಾಲಯ. ಇದು ದಕ್ಷಿಣಕ್ಕೆ ಮುಖ ಮಾಡಿದೆ. ಇದರ ಹಿಂಬದಿಯಲ್ಲಿ ಜನ ವಾಸಿಸಿರಬಹುದಾದ, ನಶಿಸಿದ ಕಟ್ಟಡಗಳ ಅವಶೇಷಗಳಿವೆ. ಮುಂಬದಿಯಲ್ಲಿ ಕರಡಿದುರ್ಗದ ಕೋಟೆಯ ಹೆಬ್ಬಾಗಿಲು ಕಂಡುಬರುತ್ತದೆ. ಈ ದೇವಾಲಯದ ಎಡ ಹಾಗೂ ಬಲ ಬದಿಯಲ್ಲಿಯೂ ಮುರುಕಲು ಮನೆಗಳ ದೃಶ್ಯಗಳಿವೆ. ಈ ಆಂಜನೇಯ ದೇವಾಲಯವು ಗರ್ಭಗೃಹ, ಸಭಾಮಂಟಪವನ್ನು ಹೊಂದಿದ್ದು ಗರ್ಭಗೃಹದಲ್ಲಿ ಸು. 8 ಅಡಿಯ ಆಂಜನೇಯ ವಿಗ್ರಹವನ್ನು ಕೆತ್ತಲಾಗಿದೆ. ಸಭಾ ಮಂಟಪ ಸಾದವಾದ ಕಂಬಗಳಿಂದೊಡಗೂಡಿದೆ. ಈ ದೇವಾಲಯವು ಸುತ್ತಲೂ ಕೋಟೆ ಮತ್ತು, ಕೋಟೆಯ ಮಹಾದ್ವಾರದ ಹಿಂಬದಿಯ ಸ್ವಲ್ಪ ಅಂತರದಲ್ಲಿರುವುದೇ ಇದರ ವಿಶೇಷವಾಗಿದೆ. ಇದು ಬಹುಶಃ ಇತ್ತೀಚಿನ ಕಟ್ಟಡವಾಗಿದೆ. ಪಾಳೇಗಾರರ ಅವಧಿಯಲ್ಲಿ ಉಚ್ಚಂಗಿ ದುರ್ಗಕ್ಕೂ ಇದಕ್ಕೂ ಸಂಬಂಧವಿದ್ದಿರಬಹುದಾಗಿದೆ.

## ಉಚ್ಚಂಗಿ ದುರ್ಗದ ಇತರ ದೇವಾಲಯಗಳು :

ಗಣಪತಿ ದೇವಾಲಯವು ಉಚ್ಚಂಗಿ ಬೆಟ್ಟದ ಮಧ್ಯದ ಹರಿಹರ ಬಾಗಿಲಗೆ ಹೋಗುವ ರಸ್ತೆಯ ಬಲ ಬದಿಯಲ್ಲಿದೆ. ಇದು ಇತ್ತೀಚಿನ ದೇವಾಲಯವಾಗಿದ್ದು ಗರ್ಭಗೃಹ ಮತ್ತು ಸಭಾ ಮಂಟಪವನ್ನು ಹೊಂದಿದೆ. ಇದು ದಕ್ಷಿಣಾಭಿಮುಖವಾಗಿದ್ದು ಗ್ರಾನೈಟ ಶಿಲೆಯಿಂದ ನಿರ್ಮಾಣಗೊಂಡಿದೆ. ಉಚ್ಚಂಗಿ ದುರ್ಗದ ಬೆಟ್ಟದ ಮಧ್ಯಭಾಗದ ಕೆಳಗಡೆ ಸೇದು ಬಾವಿಯ ದಕ್ಷಿಣಕ್ಕೆ ಪೂರ್ವಾಭಿಮುಖವಾಗಿರುವ ಆಂಜನೇಯ ಮೂರ್ತಿಯ ದೇವಾಲಯ ಇದೆ. ಗರ್ಭಗೃಹ ಸಭಾಮಂಟಪವನ್ನು ಹೊಂದಿದೆ. ಮೂರ್ತಿ ಸ್ವಲ್ಪ ಹಳೆಯದಾದರೂ ದೇವಾಲಯ ಇತ್ತೀಚಿನದು.

ಸಿದ್ದೇಶ್ವರ ಮಠ ಇದೊಂದು ಹಳೆಯ ದೇವಾಲಯವಾಗಿದ್ದು. ಉಚ್ಚಂಗಿ ದುರ್ಗದ ಕೋಟೆಯ ಒಳಗೆ ಅಮ್ಮನ ಕಟ್ಟೆಯ ನೈರುತ್ಯಕ್ಕೆ ಇದೆ. ಇದು ಗರ್ಭಗೃಹ ಅಂತರಾಳ, ನವರಂಗವನ್ನು ಹೊಂದಿದ್ದು ಸು. 25 ಅಡಿ ಉದ್ದ ಮತ್ತು 15 ಅಡಿ ಅಗಲ ವಾಗಿರುವುದಲ್ಲದೆ, ಪೂರ್ವಕ್ಕೆ ಮುಖ ಮಾಡಿದೆ. ಇದು ತುಂಬಾ ಎತ್ತರವಲ್ಲದ ಕಿರಿದಾದ ಬಾಗಿಲುವಾಡವನ್ನು ಹೊಂದಿದೆ. ಇದರ ಸುತ್ತಲೂ ಸುಂದರ ಕೆತ್ತನೆಯ ಕಂಬಗಳು ಮತ್ತು ಅಧಿಷ್ಠಾನಗಳಿದ್ದ ಅವಶೇಷಗಳು ಕಂಡುಬರುತ್ತವೆ. ಇದರ ಜೀರ್ಣೋದ್ಧಾರ ಆಗಿದೆ. ಉಚ್ಚಂಗಿ ಕೋಟೆಯ ಪ್ರವೇಶದ್ವಾರದ ಬಳಿ ಇರುವುದೇ ಕೋಷ್ಟದ ಎಲ್ಲಮ್ಮ ದೇವಾಲಯ. ಇದೊಂದು ಚಿಕ್ಕ ಗುಡಿ. ಉಚ್ಚಂಗೆಮ್ಮನಿಗೆ ಬರುವ ಬಹುತೇಕ ಭಕ್ತರೆಲ್ಲಾರು ಇಲ್ಲಿಗೆ ಬಂದು ಉಪ್ಪು ಹಾಕಿ ಹೋಗುತ್ತಾರೆ. ಕುಷ್ಟರೋಗ ಗುಣವಾಗುತ್ತದೆಂಬ ಪ್ರತೀತಿಇದೆ.

ದುರ್ಗಮ್ಮ ದೇವಾಲಯವು ಉಚ್ಚಂಗಿ ದುರ್ಗದ ಶ್ಯಾನಭೋಗರ ಓಣಿಯಲ್ಲಿದೆ. ಶ್ಯಾನಭೋಗರೆ ನಿರ್ಮಿಸಿದ್ದಾರೆಂದು ಸ್ಥಳೀಯರ ಅಭಿಪ್ರಾಯವಾಗಿ. ಇದು ಪೂರ್ವಕ್ಕೆ ಮುಖ ಮಾಡಿದೆ. ಇತ್ತೀಚಿನ ದೇವಾಲಯವಾದ ಇದು ಗರ್ಭಗೃಹ, ಸಭಾಮಂಟಪವನ್ನು ಹೊಂದಿದೆ. ಗರ್ಭಗೃದಲ್ಲಿ ಜೋಡಿದುರ್ಗಮ್ಮರ ವಿಗ್ರಹಗಳಿವೆ. ಇಲ್ಲಿಯೂ ಎಲ್ಲಾ ಜಾತ್ರೆ, ಹಬ್ಬ ಹರಿದಿನಗಳನ್ನು ಮತ್ತು ಪೂಜೆ ಪುನಸ್ಕಾರಗಳಲ್ಲಿ ವಿಶೇಷ ಪೂಜೆಯನ್ನು ಅರ್ಪಿಸಲಾಗುತ್ತದೆ.

ಹರಿಜನ ಕೇರಿಯ ದುರುಗವ್ವ ದೇವಾಲಯವು ಹರಿಜನ ಕೇರಿಯಲ್ಲಿದ್ದು, ಪೂರ್ವಕ್ಕೆ ಮುಖ ಮಾಡಿದೆ. ಇತ್ತೀಚಿನ ದಿನಗಳಲ್ಲಿ ಕಟ್ಟಿರಬಹುದಾದ ಇದು ಹರಿಜನರಿಂದ ಪೂಜಿಸಲ್ಪಡುತ್ತದೆ.

ಪಾದಗುಡಿಯು ಉಚ್ಚಂಗಿದುರ್ಗದ ಬಸ ನಿಲ್ದಾಣದ ಪಾರ್ಶ್ವದಲ್ಲಿಯೇ ಇದೆ. ಇದು ಪೂರ್ವಕ್ಕೆ ಮುಖ ಮಾಡಿದ್ದು ವಿಶಾಲವಾದ ಕಟ್ಟೆಯ ಮೇಲೆ ನಿರ್ಮಿತವಾಗಿದೆ. ಗರ್ಭಗೃಹವನ್ನು ಮಾತ್ರ ಹೊಂದಿರುವ ಈ ದೇವಾಲಯದ ಮುಂದಿನ ಮೇಲ್ಮುಖವಾಡದಲ್ಲಿ ರೇಣುಕೆಲ್ಲಮ್ಮ, ಪರಶುರಾಮರನ್ನು ಚಿತ್ರಿಸಲಾಗಿದೆ. ಇವುಗಳಲ್ಲದೆ, ತುರುಬಿನ ಕಲ್ಲು ಈಶ್ವರ ಸ್ವಾಮಿ ಗುಡಿ, ಅರಸನ ಬಾವಿಯ ಸಣ್ಣ ಗೂಡಿನ ಗಣಪತಿ, ಹಾಲಮ್ಮ ತೋಪಿನ ಮಾತಂಗವ್ವನ ಗುಡಿ, ತಿಮ್ಮಪ್ಪ ದೇವಸ್ಥಾನ, ಹೊನ್ನವ್ವ ನಾಗತಿಯ ಸಮಾಧಿ, ಕರಡಿ ಗುಡ್ಡದ ಆಂಜನೇಯ ದೇವಸ್ಥಾನ. ಕೆಳಭಾಗದ ಚಾಡಮ್ಮ ದೇವಾಲಯ ಇತ್ಯಾದಿ ದೇವಾಲಯಗಳು ನಿರ್ಮಾಣಗೊಂಡಿರುವುದು ಕಂಡುಬರುತ್ತವೆ.

ಉಚ್ಚಂಗಿ ದುರ್ಗದ ಕೋಟೆ :

ಪ್ರಾಚೀನ ಕಾಲದಿಂದಲೂ ಪ್ರಸಿದ್ಧಿ ಹೊಂದಿದ ಉಚ್ಚಂಗಿದುರ್ಗ ರಾಜಸಂತತಿಯವರಿಂದ, ಮಾಂಡಳೀಕರಿಂದ, ಪಾಳೇಗಾರರಿಂದ ಆಳ್ವಿಕೆಗೆ ಒಳಪಟ್ಟು ಬ್ರಿಟಿಷರ ಆಡಳಿತಕ್ಕೂ ಒಳಗಾಗಿತ್ತು. ಇಲ್ಲೊಂದು ಅಪೂರ್ವ ಮತ್ತು ಅಭೇದ್ಯವಾದ ಕೋಟೆ ನಿರ್ಮಾಣವಾಗಿತ್ತು.[5] ಇದನ್ನು ಬೇರೆ ಅರಸರಿಂದ ಗೆಲ್ಲಲಾಗಲಿಲ್ಲ. ಆದರೆ ಹೊಂಚುಸ್ಸರು ಗೆದ್ದಿದ್ದರು ಹಾಗಾಗಿ ಇವರಿಗೆ ಗಿರಿದುರ್ಗಮಲ್ಲ, ಶನಿವಾರಸಿದ್ಧಿ ಬಿರುದುಗಳು ಪ್ರಾಪ್ತವಾಗಿದ್ದವು.[6] ಪ್ರಸ್ತುತ ಈ ಅಧ್ಯಾಯದಲ್ಲಿ ಕೋಟೆಯ ನಿರ್ಮಾಣದ ಕಾಲ, ಕೋಟೆಯ ಲಕ್ಷಣಗಳನ್ನು ಜನಪದರ ಅಭಿಪ್ರಾಯ, ಲಭ್ಯವಾದ ಶಾಸನಾಧಾರಗಳು ಮತ್ತು ಸಾಹಿತ್ಯಾಧಾರಗಳಿಂದ ತಿಳಿಯಲು ಪ್ರಯತ್ನಿಸಿದೆ.

ಕೋಟೆಯ ನಿರ್ಮಾಣದ ಕಾಲ :

ಪ್ರಾಚೀನ ಕಾಲದ ದೇವಾಲಯ ಮತ್ತು ಕೋಟೆಯ ಕಾಲವನ್ನು ನಿರ್ಣಯಿಸುವುದು ಕಠಿಣವಾದುದು. ಆಧಾರಗಳ ಕೊರತೆಯೇ ಇದಕ್ಕೆ ಕಾರಣ. ಬನವಾಸಿಯ ಕದಂಬರ ಒಂದು ಶಾಖೆ ಉಚ್ಚಂಗಿಯಿಂದ ಆಳ್ವಿಕೆ ನಡೆಸಿತು. ಆದರೆ ಅದರ ಕಾಲದಲ್ಲಿ ಇಲ್ಲಿ ಕೋಟೆ ಇದ್ದಿರಬಹುದೆಂಬ ಸ್ಪಷ್ಟವಾದ ಆಧಾರಗಳು ಲಭ್ಯವಿಲ್ಲ. ಮೌರ್ಯರ ಕಾಲದಲ್ಲಿಯೇ ಕೋಟೆಗಳ ಬಗೆಗೆ ಅವರಿಗಿದ್ದ ಜ್ಞಾನವನ್ನು ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಕಾಣಬಹುದು, ಮತ್ತು ಮೌರ್ಯರು ದಕ್ಷಿಣಭಾರತದಲ್ಲಿ ಆಳ್ವಿಕೆ ಮಾಡಿದ್ದರು. ಕದಂಬರ ಆಳ್ವಿಕೆ ನಂತರ ಕರ್ನಾಟಕದಲ್ಲಿ ಆಳ್ವಿಕೆ ನಡೆಸಿದ ಬಾದಾಮಿಯ ಚಾಲುಕ್ಯರು ಮತ್ತು ರಾಷ್ಟ್ರಕೂಟರ ಕಾಲದ ಯಾವುದೇ ಶಾಸನಗಳಾಗಲೀ ಅವಶೇಷಗಳಾಗಲಿ ಕಂಡುಬರುವುದಿಲ್ಲ. ಮುಂದೆ ಕಲ್ಯಾಣ ಚಾಲುಕ್ಯರ ಕಾಲದ ಶಾಸನಗಳಲ್ಲಿ ಉಚ್ಚಂಗಿ ಕೋಟೆಯ ಉಲ್ಲೇಖಗಳು ದೊರೆಯಲಾರಂಭಿಸುತ್ತವೆ. ಒಂದೆರಡು ಉದಾಹರಣೆಗಳನ್ನು ಪರಿಶೀಲಿಸಬಹುದು:

ಶ್ರೀ ಮತ್ರಿಭುವನಮಲ್ಲ ಪಾಂಡ್ಯದೇವ ಪಾದಾರಾಧಕಂ ವೈರಿ ಬಳಸಾಧಕಂ ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಮನ್ಮಹಾಸಾಮನ್ತಂ ಯಂ ಬಳನಾರಾಳ್ವರು ಶ್ರೀ ಪಾಂಡ್ಯದೇವರ್ಗೆ ಬಿನ್ನಪಮಗೆಯ್ಯಲು ಜನಾದಿ ಸಂಸಿದ್ಧಿಯ ಪಟ್ಟಣಂ ಉಚ್ಚಂಗಿ ಕೋಟೆಯ[7] ಉಚ್ಚಂಗಿ ಕೋಟೆ ಉಲ್ಲೇಖವಾದ ಇನ್ನೊಂದು ಶಾಸನದಲ್ಲಿ ಹೀಗಿದೆ. ವೆಂಗಿಯ ಮಂಡಲೇಶ್ವರ ಶ್ರೀ ವಿಷ್ಣುವರ್ಧನ ಮಹಾರಾಜ ವಿಜಯಾದಿತ್ಯದೇವರು ನೊಳಂಬವಾಡಿ ಮೂವತ್ತೆರಡು ಸಾವಿರವನ್ನು ಕ್ರಿ.ಶ 1064ರಲ್ಲಿ ಆಳುವಾಗ ಮಾರೇಶ್ವರ ದೇವರ್ಗೆ ಉಚ್ಚಂಗಿ ಕೋಟೆಯ ನೈರುತ್ಯದ ದೆಸೆಯಂ.[8] ಚಾಲುಕ್ಯರ ಬುಡಾವಣಿಯೆಂದು ಕರೆಯಿಸಿಕೊಂಡ

ರಾಜಾದಿತ್ಯನು ಆಳುತ್ತಿದ್ದ. ಗಂಗವಂಶದ ಎರಡನೆಯ ಮಾರಸಿಂಹನು ಕ್ರಿ.ಶ 971ರಲ್ಲಿ ಕೋಟೆಯನ್ನು ಮುತ್ತಿ, ವಶಪಡಿಸಿಕೊಂಡನು.[9] ಉಚ್ಚಂಗಿ ದುರ್ಗದ ಕೋಟೆಯ ನಿರ್ಮಾಣದ ವಿಷಯ ಈ ಮೇಲಿನ ಆಧಾರಗಳ ಹಿನ್ನೆಲೆಯಲ್ಲಿ ಕ್ರಿ.ಶ 971ಕ್ಕಿಂತ ಮೊದಲೇ ನಿರ್ಮಾಣವಾಗಿರುವುದು ಕಂಡುಬರುತ್ತದೆ.

ಕೋಟೆಯ ಸುತ್ತುಗಳು :

ಶತ್ರುಗಳಿಂದ ರಕ್ಷಣೆಯನ್ನು ಪಡೆಯುವುದೇ ಕೋಟೆಗಳ ನಿರ್ಮಾಣದ ಮೂಲ ಉದ್ದೇಶ. ಶತ್ರುಗಳ ಹಾವಳಿ, ಅವಶ್ಯಕತೆಗಳ ಹೆಚ್ಚಳ, ಮತ್ತು, ರಾಜ್ಯವು ವಿಸ್ತಾರವಾಗುತ್ತಾ, ಹೋದಂತೆ ಕೋಟೆಯ ಸುತ್ತುಗಳು ಬೆಳೆದಿವೆ. ಆಡಳಿತದ ಪ್ರಮುಖ ಕೇಂದ್ರವಾಗಿದ್ದ ಉಚ್ಚಂಗಿಯ ಕೋಟೆ ಹಲವು ಬಾರಿ ದುರಸ್ಥಿಯೊಂದಿಗೆ, ಹೊಸ ಸುತ್ತುಗಳನ್ನು ಹೊಂದಿದೆ.

ಪಾಳೇಗಾರರ ಅವಧಿಯಲ್ಲಿ ದಾವಂತ್ಯನಾಯಕನು ಉಚ್ಚಂಗಿದುರ್ಗದ ಕೋಟೆಯನ್ನು ಬಲಪಡಿಸಿಕೊಂಡು ಪ್ರಬಲನಾಗಿದ್ದನು.[10] ಸ್ಥಳೀಯರು ಇದು 'ಏಳುಸುತ್ತಿನ ಕೋಟೆ ಎಂದು ಅಭಿಪ್ರಾಯಪಟ್ಟರೆ ಡಾ.ಸಿ.ಎಸ್ ಪಾಟೀಲರು (ಇತಿಹಾಸದರ್ಶನ ಪು. 160) ಇದು ಹಲವು ಸುತ್ತುಗಳನ್ನು ಒಳಗೊಂಡಿತ್ತು ಎಂದಿದ್ದಾರೆ. ಕದಂಬರಿಂದ ಮೊದಲು ಮಾಡಿ ವಿಜಯನಗರದ ಅರಸರವರೆಗೆ, ಕೋಟೆಯನ್ನು ಭದ್ರಪಡಿಸಿಕೊಂಡಿರುವುದಕ್ಕೆ ಆಧಾರಗಳು ಲಭ್ಯವಾಗಿಲ್ಲ. ಉಚ್ಚಂಗಿಯ ಕೋಟೆ ವಿಸ್ತಾರವಾಗಿದ್ದು, ಹಲವು ಸುತ್ತುಗಳನ್ನು ಒಳ-ಗೊಂಡಿರಬಹುದಾದುದಕ್ಕೆ ಈ ಕೆಳಗಿನ ಅಂಶಗಳು ಹೀಗಿವೆ.

ಒಂದನೆಯದಾಗಿ ಜನಸಾಮಾನ್ಯರಿಗಾಗಿ ಕೋಟೆಯ ಪಕ್ಕದಲ್ಲಿ ಊರುಗಳು ನಿರ್ಮಾಣವಾಗುತ್ತಿದ್ದು, ರಾಜ ಸಂತತಿ ಮತ್ತು ಪ್ರಮುಖ ವರ್ಗದವರು ಕೋಟೆಯೊಳಗೆ ಇರುತ್ತಿದ್ದರು. ಉಚ್ಚಂಗಿದುರ್ಗದ ಆಗ್ನೇಯ ಭಾಗಕ್ಕೆ ಊರಿದ್ದಿರಬಹುದಾದ ಅವಶೇಷಗಳೂ ಇಂದಿಗೂ ಇದ್ದು ಪಕ್ಕದಲ್ಲಿ ಹರಕಲುಗೋಡೆಗಳಿರುವುದರಿಂದ ಹೊರ ಕೋಟೆಯ ವಿಸ್ತಾರ ಈಗಿರುವುದಕ್ಕಿಂತಲೂ ದೊಡ್ಡದಾಗಿತ್ತು. ಕೋಟೆಯ ಒಳಗೆ ಪ್ರವೇಶಿಸಲು ಮೂರು ಬಾಗಿಲುಗಳನ್ನು ದಾಟಬೇಕಾಗಿದ್ದು, ಕ್ಷೇತ್ರ ವೀಕ್ಷಣೆಯ ಅವಧಿಯಲ್ಲಿ ಗಮನಿಸಿದಂತೆ ಉಚ್ಚಂಗಿ ಕೋಟೆಯು ಸಧ್ಯದಲ ಹರಿದ ಮುರುಕಲು ಮೂರು ಸುತ್ತುಗಳನ್ನು ಒಳಗೊಂಡಿದ್ದು ಈ ಸುತ್ತುಗಳು ದಕ್ಷಿಣ ಭಾಗಕ್ಕೆ ವಿಸ್ತರಿಸಿವೆ.

ಕೋಟೆಯ ಲಕ್ಷಣಗಳು :

ದಕ್ಷಿಣೋತ್ತರವಾಗಿ ಹಬ್ಬಿರುವ ಎರಡು ಬೆಟ್ಟಗಳನ್ನು ಬಳಸಿ ಹೊರಕೋಟೆಯನ್ನು ಕಟ್ಟಿದ್ದು ಇದೊಂದು ಗಿರಿದುರ್ಗವಾಗಿದೆ. ಇದನ್ನು ತಳಪಾಯದ ಆಧಾರವಿಲ್ಲದೆ ಹಾಸು ಬಂಡೆಯ ಮೇಲೆ ನಿರ್ಮಿಸಿದಂತಿದೆ. ಬೆಟ್ಟದ ತುದಿಯನ್ನು ತಲುಪಲು ಶತ್ರುಗಳಿಗೆ ಸಾಧ್ಯವಾಗದಂತೆ ಕೋಟೆ ಭದ್ರವಾಗಿದೆ. ಕೋಟೆಯ ಗೋಡೆಯು 10 ಅಡಿ ಎತ್ತರವಾಗಿದ್ದು ಕೆಲವು ಕಡೆ ಹೆಚ್ಚು ಕಡಿಮೆ ಇದೆ. ಇದರ ಅಗಲ ಸುಮಾರು 5 ಅಡಿಗಳಾಗಿದ್ದು ಕೆಲವು ಸ್ಥಳಗಳಲ್ಲಿ 10 ಅಡಿಯವರೆಗೂ ಇದೆ. ಕೋಟೆ ಗೋಡೆಯ ಕೆಳಭಾಗದಲ್ಲಿ ಆಯತಾಕಾರದ ಕಲ್ಲುಗಳನ್ನು ಬಳಸಿದ್ದು ಮೇಲ್ಭಾಗದಲ್ಲಿ ಮಧ್ಯಮಗಾತ್ರದ ಕಲ್ಲುಗಳ ಬಳಕೆಯಾಗಿದೆ. ಸೂಕ್ಷ್ಮವಾಗಿ ಇದನ್ನು ಅವಲೋಕಿಸಿದರೆ 3 ವಿಧದ ಹಂತಗಳನ್ನು ಗುರುತಿಸಬಹುದು, ಮತ್ತು, ಮೇಲ್ಭಾಗದ ಗೋಡೆಯಲ್ಲಿ ಗಾರೆಯ ಉಪಯೋಗವಿದ್ದು ಬಂದೂಕು ಬಳಸಲು ಕಿಂಡಿಗಳನ್ನು ಅಳವಡಿಸಲಾಗಿದೆ. ಕೋಟೆಯ ಆಯಕಟ್ಟಿನ ಸ್ಥಳಗಳಲ್ಲಿ(ಬತೇರಿ)ಕೊತ್ತಳ-ಗಳಿದ್ದು ಇವು 120ಕ್ಕೂ ಹೆಚ್ಚಿವೆ ಎಂದು ಊರಿನವರು ಅಭಿಪ್ರಾಯಪಟ್ಟರೂ, ಪ್ರಸ್ತುತ ಸುಮಾರು 30 ಕೊತ್ತಳಗಳು ಮಾತ್ರ ಗೋಚರಿಸುತ್ತವೆ. ಇವುಗಳನ್ನು ಶಸ್ತ್ರಗಳ ಸಹಿತ ಮೇಲೇರಲು ಅನುಕೂಲವಾಗುವಂತೆ ಚೌಕಾಕಾರ ಮತ್ತು ವರ್ತುಲಾಕಾರದಲ್ಲಿ ನಿರ್ಮಿಸಲಾಗಿದೆ. ಶತ್ರುಗಳ ಬರುವಿಕೆಯನ್ನು ಗ್ರಹಿಸುವುದು ಮತ್ತು ಕೋಟೆ ರಕ್ಷಣೆ ಮಾಡಿಕೊಳ್ಳುವುದು ಇವುಗಳ ನಿರ್ಮಾಣದ ಮೂಲ ಉದ್ದೇಶವಾಗಿದೆ.

ಉಚ್ಚಂಗಿಯ ಕೋಟೆಗೆ ಆರು ಪ್ರಮುಖ ಬಾಗಿಲುಗಳಿದ್ದು, ದಿಡ್ಡಿ ಮತ್ತು ಉಪಬಾಗಿಲುಗಳನ್ನು ಹೊಂದಿದೆ. ಕೋಟೆಯ ಪೂರ್ವದಿಂದ ಒಳ ಪ್ರವೇಶಿಸಲೂ ಇರುವುದೇ ಮುಖ್ಯಬಾಗಿಲಾಗಿದ್ದು, ದೂರದಿಂದ ಇದು ಗೋಚರಿಸುವುದಿಲ್ಲ. ಇದರ ಬಾಗಿಲವಾಡದಲ್ಲಿ ಲಿಂಗವನ್ನು ಕೆತ್ತಿದ್ದು, ಅದಕ್ಕೆ ಎರಡು ಆನೆಗಳು ನೀರನ್ನು ಸುರಿಯುವ ದೃಶ್ಯವಿದೆ. ಇದರ ಪಾರ್ಶ್ವಗಳಲ್ಲಿ ಬೃಹದಾಕಾರದ ಗೋಡೆಗಳಿದ್ದು ಇದಕ್ಕೆ ಇಪ್ಪತ್ತು ಮೀಟರ್ ಅಂತರದಲ್ಲಿ ಎರಡನೆಯ ಬಾಗಿಲಿದೆ. ಇದು ಉತ್ತರಾಭಿಮುಖವಾಗಿರುವುದಲ್ಲದೆ ಇದರ ಮೇಲ್ಭಾಗದಲ್ಲಿ ಗಣೇಶನ ಶಿಲ್ಪವನ್ನು ಕೆತ್ತಲಾಗಿದ್ದು. ಪಾರ್ಶ್ವ ಗೋಡೆಯಲ್ಲಿ ದೊಡ್ಡ ಗಾತ್ರದ ತೆನೆಗಳನ್ನು ಕಾಣಬಹುದು. ಮೂರನೆಯ ಬಾಗಿಲು, ಎರಡು ಚೌಕಾಕಾರದ ಕೊತ್ತಳ ಮಧ್ಯದಲ್ಲಿದ್ದು, ಕಂಬಗಳು ಕಟ್ಟೆಯ ಮೇಲಿರುವುದು ಕಾಣುವುದು. ಇದರ ಎಡ-ಬಲಕ್ಕೆ ಒಳಗೋಡೆಯಲ್ಲಿ 12ನೇ ಶತಮಾನಕ್ಕೆ ಮೊದಲೇ ನಿರ್ಮಾಣಗೊಂಡಿರಬಹುದಾದ ಕಂಬಗಳು ಮತ್ತು ಶಿಲ್ಪಗಳ ಅವಶೇಷ-ಗಳನ್ನು ಕಾಣಬಹುದಾಗಿದೆ.

ನಾಲ್ಕನೆಯದು ಹರಿಹರದ ದಿಕ್ಕಿಗೆ ಮುಖವಾಗಿರುವುದರಿಂದ ಹರಿಹರದ ಬಾಗಿಲೆಂದು ಕರೆಯಲ್ಪಟ್ಟಿದ್ದು, ಇದು ವೈರಿಗಳಿಗೆ ಗೋಚರಿಸದಂತಿರಲು ಇಂಗ್ಲೀಷಿನ L ಆಕಾರದಲ್ಲಿ ಗೋಡೆಯನ್ನು ಕಟ್ಟಲಾಗಿದೆ. ಪಶ್ಚಿಮ ಭಾಗದಿಂದ ಉಚ್ಚಂಗಿ ಕೋಟೆಯನ್ನು ಪ್ರವೇಶಿಸಲು ಈ ಬಾಗಿಲನ್ನು ಬಿಟ್ಟರೆ ಬೇರೆ ಯಾವ ಮಾರ್ಗವೂ ಇಲ್ಲ. ಐದನೆಯದು ತುಂಬಾ ಇಕ್ಕಟ್ಟಾಗಿದ್ದು ಸುಮಾರು 3 ಅಡಿ ಎತ್ತರವಾಗಿದೆ. ಈ ಬಾಗಿಲಿಗೆ ಇಂದಿಗೂ ಬಾಳೆಹಣ್ಣನ್ನು ತಿಕ್ಕುವುದು ಪದ್ಧತಿ ರೂಢಿಯಲ್ಲಿದೆ ಮತ್ತು ಉಚ್ಚಂಗೆವ್ವ ದೇವಿಯ ದರ್ಶನಕ್ಕೆ ಈ ಮಾರ್ಗವನ್ನು ಬಳಸಲೇಬೇಕು.

ಆರನೆಯದು ಮುಖ್ಯವಾದುದು ಈ ಬಾಗಿಲು ಎರಡು ಚೌಕಾಕಾರದ ಕೊತ್ತಳಗಳ ಮಧ್ಯದಲ್ಲಿದ್ದು, ಬಾಗಿಲಿನ ಮೇಲೆ ಗಣೇಶನನ್ನು ಕೆತ್ತಲಾಗಿದೆ. ಇದು 6 ಅಂಕಣಗಳನ್ನು ಮತ್ತು ಪಾರ್ಶ್ವಗಳಲ್ಲಿ ಕಟ್ಟೆಗಳನ್ನು ಹೊಂದಿದೆ. ಬಾಗಿಲಿನ ಒಳಮೈಯನ್ನು ಕಮಾನಿನಿಂದ ಅಲಂಕರಿಸಲಾಗಿದ್ದು, ಕಮಾನಿನ ಕಲ್ಲುಗಳನ್ನು ಮುಂದೆ ಚಾಚಿ ಸ್ವಲ್ಪ ಭಾಗ ತುಂಡರಿಸಿದಂತಿದೆ. ಮೂರನೆಯ ಬಾಗಿಲು ದಕ್ಷಿಣದ ಗೋಡೆಯ ಪೂರ್ವ ಭಾಗಕ್ಕೆ ದಿಡ್ಡಿಯ ಬಾಗಿಲಿದ್ದು, ಇದು ಸುಮಾರು 5 ಅಡಿ ಎತ್ತರ 4 ಅಡಿ ಅಗಲವಾಗಿದ್ದು ಬೇರೆ ಬಾಗಿಲುಗಳಿಗಿಂತ ಭಿನ್ನವಾಗಿದೆ. ಇಲ್ಲಿಂದ ಕೋಟೆಯ ದಕ್ಷಿಣ ಭಾಗಕ್ಕೆ ಹೋಗಲು ಇದು ಹತ್ತಿರದ ಮಾರ್ಗವಾಗಿದೆ. ಇದು ಗುಪ್ತ ದ್ವಾರವೆಂತಲೂ ಸ್ಥಳೀಯರಿಂದ ಗುರುತಿಸಲ್ಪಟ್ಟಿದೆ.

ಎರಡನೆಯ ಬಾಗಿಲಿನ ಬಲಕ್ಕಿರುವುದೇ ಅದರ ಉಪ ಬಾಗಿಲು. ಇದನ್ನು ದೊಡ್ಡ ಬಾಗಿಲನ್ನು ಮುಚ್ಚಿದಾಗ ಉಪಯೋಗಿಸುತ್ತಿದ್ದರು. ಉಚ್ಚಂಗಿ ಕೋಟೆಯ ದಕ್ಷಿಣ ಭಾಗದ ಹಿರೇ ಹೊಂಡದಿಂದ ಮಾರ್ಗವೊಂದು ಅದೇ ದಿಕ್ಕಿನಿಂದ ಕೋಟೆಯ ಒಳ ಪ್ರವೇಶಿಸುತ್ತದೆ. ಮತ್ತು ಮಾರ್ಗದುದ್ದಕ್ಕೂ ಹಾಸಿರುವ ಕಲ್ಲುಗಳು ತುಂಬಾ ಸವೆದಿರುವುದು ಕಂಡುಬರುತ್ತದೆ. ಪ್ರಾಚೀನ ಕಾಲದಿಂದಲೂ ಈ ಕೋಟೆಗೆ ನೀರಿನ ಸರಬರಾಜು ಇಲ್ಲಿಂದಲೇ ಆಗಿರಬಹುದು. ಈ ಭಾಗದಲ್ಲಿ ಪ್ರಾಚೀನ ದೇವಾಲಯ ಇದ್ದಿರಬಹುದಾದ ಕುರುಹುಗಳನ್ನು ಕಾಣಬಹುದು.

## ಉಚ್ಚಂಗಿದುರ್ಗದ ಕೋಟೆಯ ಮಹತ್ವ :

ಒಂದು ರಾಜ್ಯದ ಅಳಿವು-ಉಳಿವಿಗೆ ರಾಜನ ಪಾತ್ರ ಎಷ್ಟು ಮುಖ್ಯವೋ ಅಷ್ಟೇ ಕೋಟೆಗಳ ಪಾತ್ರವೂ ಮುಖ್ಯವಾದುದು. ಕೋಟೆ ನೀರನ್ನು ಸಂಗ್ರಹಿಸುವ ಕೊಡ ಇದ್ದಹಾಗೆ, ಕೊಡಕ್ಕೆ ತೂತು ಬಿದ್ದರೆ ನೀರು ಉಳಿಯಲಾರದು. ಹಾಗೆಯೇ ಕೋಟೆಯು ಸಡಿಲವಾದರೆ ರಾಜ್ಯ ಉಳಿಯಲಾರದು. ಕೋಟೆಯನ್ನು ಗೆದ್ದುದಾದರೆ ಇಡಿ ರಾಜ್ಯವೇ ಸಿಕ್ಕಂತೆ. ಅದು ಕೋಟೆಯನ್ನು ಕಟ್ಟಿಸುವುದು ಮತ್ತು ಗೆಲ್ಲುವುದು ಪ್ರತಿಷ್ಠೆಯ ವಿಷಯವಾಗಿತ್ತು.

ಉಚ್ಚಂಗಿ ಕೋಟೆಯು ಮಹತ್ವದ ಮತ್ತು ಅಭೇದ್ಯವಾದ ಕೋಟೆಯಾಗಿದ್ದು, ಕಾಡುವೆಟ್ಟಿ ಎಂಬ ಪಲ್ಲವ ದೊರೆಯು ಇದನ್ನು ದೀರ್ಘ ಕಾಲದವರೆಗೆ ಆಳುತ್ತಿ, ನೊಳಂಬರನ್ನು ತನ್ನ ಶೌರ್ಯದಿಂದ ಮಂಗು ಬಡಿಸಿದರೂ ಅವನಿಂದ ಕೋಟೆಯನ್ನು ಗೆಲ್ಲಲಾಗಲಿಲ್ಲ.[11] ಗಂಗ ವಂಶದ 2ನೇ ಮಾರಸಿಂಹನು ಕ್ರಿ.ಶ 971ರಲ್ಲಿ ಚಾಲುಕ್ಯರಿಂದ ಇದನ್ನು ವಶಪಡಿಸಿಕೊಂಡನಲ್ಲದೆ ಈ ಕೋಟೆಯನ್ನು ಜಯಿಸುವುದರಲ್ಲಿ ಚಾವುಂಡರಾಯನ ಪಾತ್ರ ಮಹತ್ವದಾಗಿದುದರಿಂದ ಅವನಿಗೆ 'ರಣರಂಗ ಸಿಂಹ' ಎಂಬ ಬಿರುದು ಬಂದಿದೆ.[12]

ಹೊಯ್ಸಳ ಬಲ್ಲಾಳನು ಉಚ್ಚಂಗಿಯ ಅಭೇದ್ಯವಾದ ಕೋಟೆಯನ್ನು ಭೇದಿಸಲು ತಂಡೋಪತಂಡ ಆನೆಗಳನ್ನು ಉಪಯೋಗಿಸಿದನು. ಇವು ಕ್ರೂರವಾಗಿ ಕೋರೆಗಳಿಂದ ಕೋಟೆಯ ಗೋಡೆಗಳನ್ನು ಅಗೆದು ಕೋಟೆಯ ಗೋಡೆಗಳನ್ನು ಕೆಡಹಿದ ನಂತರ ಸೈನ್ಯವು ಒಳ ಹೊಕ್ಕು ಸ್ತ್ರೀಯರ, ಕುದುರೆ ಸವಾರರ, ಸೈನ್ಯವನ್ನು ಮತ್ತು ಖಜಾನೆಯನ್ನು ಸುಲಿಗೆ ಮಾಡಲಾಯಿತು.[13] ಈ ವೇಳೆಯ ವಿಷಯವನ್ನು ಬಳಸಿಕೊಂಡು ಕೆಲವು ಪ್ರಶ್ನೆಗಳೊಂದಿಗೆ ಈ ಕೆಳಗಿನಂತೆ ಚರ್ಚಿಸಲಾಗಿದೆ :

1) ಒಂದನೆಯದಾಗಿ ಉಚ್ಚಂಗಿ ದುರ್ಗವನ್ನು ಗೆಲ್ಲಲು ಕಷ್ಟಕರವಾಗಿರಬಹುದೇಕೆ?
2) ಎರಡನೆಯದಾಗಿ ಇದನ್ನು ಗೆಲ್ಲುವುದರ ಮಹತ್ವವೇನು ? ಗೆದ್ದವರ ಪ್ರತಿಷ್ಠೆ ಏಕೆ ಹೆಚ್ಚುತ್ತಿತ್ತು ?

ಒಂದನೆಯ ಪ್ರಶ್ನೆಗೆ ಪೂರಕವಾದಂತೆ ಉಚ್ಚಂಗಿದುರ್ಗವು ಭೌಗೋಳಿಕವಾಗಿ ಇದರ ಸುತ್ತಮುತ್ತಲಿನ ಪ್ರದೇಶಗಳಿಗಿಂತಲೂ ಎತ್ತರವಾಗಿದ್ದು, ಸುತ್ತಲೂ ಆಳವಾದ ಕಂದಕ–ಗಳು ಮತ್ತು ಕಡಿದಾದ ಬೆಟ್ಟವನ್ನು ಹೊಂದಿದ್ದು ಕೋಟೆಯೊಳಗೆ ಪ್ರವೇಶಿಸಲು ಸುಲಭವಾಗಿರಲಿಲ್ಲ. ಎರಡನೆಯದಾಗಿ ಈ ಕೋಟೆಯು 1.25 ಕಿ.ಮೀ. ಉದ್ದವಾಗಿದ್ದು ಉತ್ತರದಿಂದ ದಕ್ಷಿಣ ಭಾಗದ ಮಧ್ಯ ಭಾಗಕ್ಕೆ ಇಳಿಮುಖವಾಗಿದ್ದು, ಮತ್ತೆ ಇದೇ ಇಳಿಮುಖವನ್ನು ಪುನ: ದಕ್ಷಿಣ ಭಾಗಕ್ಕೆ ಕಾಣಲಾಗುವುದು. ತುಂಬಾ ಅಗಲ ಮತ್ತು ಎತ್ತರವಾದ ಗೋಡೆಗಳ ರಚನೆಯಿದ್ದು ಗಾರೆಯನ್ನು ಬಳಸಿ ಭದ್ರಪಡಿಸಲಾಗಿದೆ. ಕೋಟೆಯ ಬಾಗಿಲುಗಳನ್ನು ಪತ್ತೆ ಹಚ್ಚಿ ಐದು ಬಾಗಿಲುಗಳನ್ನು ದಾಟಿ ಒಳಬರುವುದು ಕಠಿಣತರದ ಕೆಲಸವೇ ಸರಿ. ಬೆಟ್ಟದ ಮೇಲೆ ಕೋಟೆಯ ಆನೆಗಳಾಗಲಿ, ಕುದುರೆ ಮತ್ತು ಶಸ್ತ್ರಗಳನ್ನು ತೆಗೆದುಕೊಂಡು ಹೋಗಲು ಸಶಕ್ತವಾದ ಸೈನ್ಯವಿರಲೇ ಬೇಕಾಗುವುದು.

ಮೂರನೆಯದಾಗಿ ಕೋಟೆಯ ಒಳಗಡೆ ನೀರಿನ ಸೌಲಭ್ಯವಿದ್ದು ಇದರ ಗುರುತುಗಳು ಕಂಡುಬರುತ್ತವೆ. ಪೂರ್ವದ ಬಾಗಿಲು ಶತ್ರುಗಳಿಂದ ಆಕ್ರಮಿಸಲ್ಪಟ್ಟರೂ ಪಶ್ಚಿಮದ ಹಿಂಬರದ ಬಾಗಿಲಿನಿಂದ ಹೊರ ಬರುವ ಸೌಲಭ್ಯವಿರುವುದು ಕಂಡುಬಂದಿದೆ.

ಎರಡನೆಯ ಪ್ರಶ್ನೆಯನ್ನು ಚರ್ಚಿಸಲಾಗಿ, ಉಚ್ಚಂಗಿದುರ್ಗ ಒಂದು ಪಟ್ಟಣವಾಗಿದ್ದು[14] ವಿಶಾಲ ಪ್ರದೇಶಗಳನ್ನು ಒಳಗೊಂಡಿತ್ತು. ನೊಳಂಬವಾಡಿ 32 ಸಾವಿರವನ್ನು ವೆಂಗಿ ಮಂಡಳೇಶ್ವರ ವಿಷ್ಣುವರ್ಧನ ವಿನಯಾದಿತ್ಯ ದೇವನು ಆಳುವಾಗ ಉಚ್ಚಂಗಿದುರ್ಗ ಪ್ರಮುಖ ಕೇಂದ್ರವಾಗಿದ್ದಿರಬೇಕು. ಆಗ ಉಚ್ಚಂಗಿ ಮೂವತ್ತನ್ನು ದೇವಪ್ಪಯ್ಯ ಆಳುತ್ತಿದ್ದ[15]. ಮೂವತ್ತು ಗ್ರಾಮನಾಮ ಸೂಚಿಯಾದರೆ ಉಚ್ಚಂಗಿ ಇವಕ್ಕೆ ಕೇಂದ್ರ ಪ್ರದೇಶವಾಗಿರಲೂ ಬಹುದು. ಮತ್ತು ನೊಳಂಬವಾಡಿ 32 ಸಾವಿರಕ್ಕೆ ಪಾಂಡ್ಯರ ಕಾಲದಲ್ಲಿ ರಾಜಧಾನಿಯಾಗಿತ್ತು[16]. ಮತ್ತು ದಕ್ಷಿಣದಿಂದ ಗಂಗ, ಹೊಯ್ಸಳರಿಗೆ, ಉತ್ತರದಿಂದ ರಾಷ್ಟ್ರಕೂಟ ಚಾಳುಕ್ಯರಿಗೆ ಗಡಿ ಭಾಗವಾಗಿರಲಿಕ್ಕೂ ಸಾಧ್ಯತೆಯಿರುವುದರಿಂದ ಉಚ್ಚಂಗಿ ನೆಲೆಯ ಕೋಟೆಯನ್ನು ಗೆಲ್ಲುವುದು ಒಂದು ಪ್ರತಿಷ್ಠೆಯ ವಿಷಯವಾಗಿರುವುದಲ್ಲದೆ ಮಹತ್ವ ಭಾಗವೂ ಆಗಿದೆ.

ವಿಜಯನಗರೋತ್ತರ ಪಾಳೆಗಾರರಿಗೂ ಪ್ರಮುಖ ನೆಲೆಯಾಗಿದಲ್ಲದೆ, ಈ ಕೋಟೆಯನ್ನು ಅನೇಕ ದುರಸ್ತಿ ಮಾಡಿರುವುದು ಕಂಡುಬರುತ್ತದೆ. ಉಚ್ಚಂಗಿ ಮತ್ತು ಚಿತ್ರದುರ್ಗದ ಕೋಟೆಗಳಲ್ಲಿ ಕೆಲವು ಸಾಮ್ಯತೆಗಳು ಬಾಹ್ಯ ಕಂಡುಬರುವುದರಿಂದ ಪಾಳೇಗಾರರ ಅವಧಿಯಲ್ಲಿ ಈ ಕೋಟೆಯು ಪ್ರಮುಖವಾದ ದುರಸ್ತಿ ಕಾರ್ಯ ನಡೆದಿರುವುದು ಕಂಡು-ಬರುತ್ತದೆ. ಟಿಪ್ಪುವಿನ ನಂತರ ಬ್ರಿಟೀಷರ ಆಡಳಿತಕ್ಕೆ ಬಳ್ಳಾರಿಯಲ್ಲಿಯೇ ಇದು ಸೇರಿದ್ದು ಈಗ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳ ಗಡಿ ಪ್ರದೇಶವಾಗಿದೆ.

ಕರಡಿದುರ್ಗ :

ಉಚ್ಚಂಗಿದುರ್ಗದ ಮೇಲೇರಿ ನೈಋತ್ಯದ ಕಡೆಗೆ ನೋಡಿದರೆ ಒಂದು ಬೆಟ್ಟದ ತುದಿಯಲ್ಲಿ ಕಟ್ಟಿರುವ ಕೋಟೆಯು ಕಾಣಬರುವುದು. ಈ ಕೋಟೆಯು ಇಂದು ಕರಡಿದುರ್ಗವೆಂದು ಖ್ಯಾತಿಹೊಂದಿದೆ. ಉಚ್ಚಂಗಿದುರ್ಗದ ಪಶ್ಚಿಮ ದಿಕ್ಕಿನಲ್ಲಿರುವ ಹರಿಹರ ಬಾಗಿಲು ಕರಡಿ ದುರ್ಗದ ಕಡೆಯಿಂದ ಬರುವವರಿಗೆ ಬಹು ಸಮೀಪ ಮಾರ್ಗವಾಗಿದೆ. ಹರಿಹರದ ಬಾಗಿಲಿಂದ ಇಳಿದು ಸಣ್ಣ ಸಣ್ಣ ಬೆಟ್ಟಗಳನ್ನು ಸೀಳಿಕೊಂಡು ಕರಡೀದುರ್ಗದವರೆಗೂ ನಡೆದು ಹೋಗುವುದಕ್ಕೆ ಅಂದಿನ ಕಾಲದಲ್ಲಿ ನಿರ್ಮಿಸಿದ ಕಾಲು ದಾರಿ ಇದೆ. ಈ ದಾರಿಯನ್ನು ಹಿಡಿದು ಗದ್ದೆಗಳ ಬಯಲಿನಿಂದ ಕರಡಿದುರ್ಗದ ಕೆಳ ಭಾಗಕ್ಕೆ ಬಂದರೆ ದುರ್ಗಕ್ಕೆ ಹೋಗಲು ಸಹಾಯಕವಾಗುವಂತೆ ಕಲ್ಲು ಹಾಸಿನ ದಾರಿ ಇದೆ. ಇದರ ಮೂಲಕ ಕರಡಿದುರ್ಗಕ್ಕೆ ಪ್ರವೇಶಿಸಲು ಒಂದೇ ಒಂದು ಬಾಗಿಲು ಇದೆ. ಈ ಬಾಗಿಲು ಬಿದ್ದು ಹೋಗಿದೆ. ದಕ್ಷಿಣಕ್ಕೆ ಮುಖ ಮಾಡಿರುವ ಈ ಬಾಗಿಲವರೆಗಿನ ದಾರಿಯ ಹಾಸುಗಲ್ಲುಗಳು ಸವೆದು ಹೋಗಿರುವುದನ್ನು ನೋಡಿದರೆ, ಈ ದುರ್ಗದಲ್ಲಿ ನೂರಾರು ವರ್ಷಗಳ ಅಸ್ತಿತ್ವವಿದ್ದುದನ್ನು ಕಾಣಬಹುದು.

ಇಲ್ಲಿನ ಕೋಟೆಯನ್ನು ಗಮನಿಸಿದರೆ ಪಾಳೇಗಾರರ ಕಾಲದಲ್ಲಿ ಕಟ್ಟಲಾದುದೆಂದು ಸ್ಪಷ್ಟವಾಗಿ ಹೇಳಬಹುದು. ಅಲ್ಲದೆ ಉಚ್ಚಂಗಿದುರ್ಗದಿಂದ ಇಲ್ಲಿಗೆ ಪ್ರತ್ಯೇಕ ದಾರಿಯೇ ಇರುವುದರಿಂದ ಇವೆರಡು ದುರ್ಗಗಳ ಮಧ್ಯ ಇದ್ದಿರಬಹುದಾದ ಸಂಬಂಧವು ಖಚಿತವಾಗುವುದು. ಉಚ್ಚಂಗಿದುರ್ಗದ ಕೋಟೆಗೂ ಇಲ್ಲಿನ ಕೋಟೆಗೂ ಹೋಲಿಸಿದರೆ ಈ ಕೋಟೆ ತುಂಬಾ ಚಿಕ್ಕದು, ಆದರೆ ಮಹತ್ವವುಳ್ಳದ್ದಾಗಿದೆ. ಕಾರಣವೆಂದರೆ ಈ ಕೋಟೆಯ ಒಳಗಿರುವ ವಸತಿ ಗೃಹಗಳು ಕೋಟೆಯ ದ್ವಾರವನ್ನು ಪ್ರವೇಶಿಸಿದಾಗ ನಮಗೆ ಮೊದಲು ಆಂಜನೇಯ ದೇವಸ್ಥಾನ ಸಿಗುವುದು. ಈ ದೇವಾಲಯವನ್ನು ಇತ್ತೀಚೆಗೆ ನವೀಕರಿಸಲಾಗಿದ್ದು ಇಲ್ಲಿ ಕಟ್ಟಿರುವ ದೇವಾಲಯದ ಗೋಡೆ ಯೊಂದರಲ್ಲಿ ಪಾಳೇಗಾರರ ಕಾಲದ ಶಾಸನವೊಂದಿದೆ. ಈ ದುರ್ಗಕ್ಕೆ 8 ಬುರುಜುಗಳಿವೆ. ಒಂದೇ ಬಾಗಿಲನ್ನು ಹೊಂದಿರುವ ಈ ಕೋಟೆಯು ಪಾಳೇಗಾರರ ಮತ್ತು ಅವರ ಪರಿವಾರ ಅಥವಾ ಸೈನ್ಯದ ವಾಸಕ್ಕಾಗಿಯೇ ಪ್ರತ್ಯೇಕವಾಗಿಯೇ ಈ ದುರ್ಗವನ್ನು ನಿರ್ಮಾಣ ಮಾಡಿರಬೇಕು. ಏಕೆಂದರೆ ಕೋಟೆ ಒಳಗೆ ಮನೆಯ ಗೋಡೆಯ ಅವಶೇಷ ಹಾಗೂ ಸು. 10 ದಿವಸ ಧಾನ್ಯ ಸಂಗ್ರಹಿಸಲು

ಬಳಸಬಹುದಾದ ಉಗ್ರಾಣಗಳನ್ನು ಕಟ್ಟಲಾಗಿದೆ. ಅವುಗಳಲ್ಲಿ ಕೆಲವು ಇನ್ನೂ ಸುಸ್ಥಿತಿಯಲ್ಲಿವೆ. ಈ ಕೋಟೆಯಲ್ಲಿರುವ ಕಟ್ಟಡಾವಶೇಷಗಳನ್ನು ಸೂಕ್ಷ್ಮವಾಗಿ ಅಭ್ಯಸಿಸಿದರೆ ಪಾಳೆಯಗಾರರು ಅಥವಾ ಅದಕ್ಕೂ ಮುಂಚೆ ಇದ್ದಂತಹ ವಿಜಯನಗರದ ಅರಸರ ಕಾಲದಲ್ಲಿ ಯಾವ ರೀತಿಯಲ್ಲಿ ಮನೆಗಳನ್ನು ಕಟ್ಟುತ್ತಿದ್ದರು. ಅವರು ಬಳಸಿರುವ ವಸ್ತುಗಳೇನು? ಹಾಗೂ ಅವರ ಮನೆ ನಿರ್ಮಾಣದ ಕ್ರಮಗಳೇನು! ಎಷ್ಟೆಷ್ಟು ಉಪಗೃಹಗಳನ್ನು ಮನೆಗಳಲ್ಲಿ ನಿರ್ಮಿಸಿದ್ದರು! ಎಂದೆಲ್ಲಾ ಅಂಶಗಳನ್ನು ಇರುವ ಕಟ್ಟಡಾವಶೇಷಗಳಿಂದ ಗುರುತಿಸಬಹುದಾಗಿದೆ. ಉಗ್ರಾಣಗಳನ್ನು ದುಂಡಾಗಿ ಕಟ್ಟಲಾಗಿದ್ದು ಮಧ್ಯ ದವಸಗಳನ್ನು ಶೇಖರಿಸುತ್ತಿದ್ದಿರಬಹುದು. ಈ ವಸತಿ ಗೃಹಗಳ ಸುರಕ್ಷತೆಗೆ ದುರ್ಗದ ಮಧ್ಯಭಾಗದಲ್ಲಿ ಒಂದು ಪ್ರತ್ಯೇಕ ಬುರುಜು ನಿರ್ಮಿಸಲಾಗಿದೆ. ಇದರ ಮೇಲೆ ಹತ್ತಿ ನೋಡಿದರೆ ಇಡೀ ಕರಡಿ ದುರ್ಗದ ಎಲ್ಲಾ ಮನೆಗಳು ಕಾಣಬರುವವು. ಅಲ್ಲದೆ ಈ ಬುರುಜಿನಿಂದ ಶತ್ರುಗಳು ಮುತ್ತಿ ಬರುವುದನ್ನು ನೋಡಲು ಹಾಗು ಕೋಟೆಯ ಜನರ ಸುರಕ್ಷತೆಗಾಗಿ ಇದು ಬಹು ಸಹಾಯಕಾರಿಯಾಗಿದ್ದಿರಬಹುದು. ಕೋಟೆಯ ಗೋಡೆಗಳಲ್ಲಿ ಬಂದೂಕಿನ ಕಿಂಡಿಗಳು ಅಲ್ಲಲ್ಲಿ ಉಳಿದಿವೆ. ಇದರಿಂದ ರಕ್ಷಣೆಗಾಗಿಯೇ ಪ್ರತ್ಯೇಕ ಸೈನ್ಯ ಇಲ್ಲಿರಬಹುದಾದುದು ಸ್ಪಷ್ಟವಾಗುವುದು.

ಕೋಟೆಯಲ್ಲಿರುವ ಮನೆಗಳನ್ನು ಕುರಿತು ಹೇಳುವದಾದರೆ, ಚೌಕಕಾರದಲ್ಲಿ ನಿರ್ಮಿಸಲಾದ ಮನೆಗಳಿಗೆ ನಾಲ್ಕೈದು ಕೋಣೆಗಳುಳ್ಳ ಹಜಾರ ಅಥವಾ ಪಡಸಾಲೆಗಳಿವೆ. ಮನೆಗಳ ಒಳಗೆ ಗೋಡೆಗಳಲ್ಲಿ ಚಿಕ್ಕ ಚಿಕ್ಕ ಗೂಡುಗಳಿವೆ. ಇವುಗಳು ಚಿಕ್ಕಪುಟ್ಟ ಸಾಮಾನುಗಳು ಅಥವಾ ದೇವರನ್ನು ಇದರಲ್ಲಿಟ್ಟು ಪೂಜಿಸುವುದಕ್ಕಾಗಿ ನಿರ್ಮಿಸಿರಬಹುದು. ಕೋಟೆಯ ತುಂಬೆಲ್ಲಾ ಮನೆಗಳಿರುವುದರಿಂದ ವಿಶಾಲವಾದ ಬೀದಿಗಳಿಲ್ಲ. ಮನೆಗಳನ್ನು ಬಹಳ ಹತ್ತಿರವಾಗಿ ಕಟ್ಟಲಾಗಿದ್ದು, ಓಡಾಡಲು ಐದತ್ತು ಅಡಿಗಳಷ್ಟು ಜಾಗವನ್ನು ಮಾತ್ರ ಬಿಟ್ಟಿರುವುದು ಅಲ್ಲಿನ ಇಂದಿನ ಪರಿಸ್ಥಿತಿಯಿಂದ ಗುರುತಿಸಬಹುದು. ಅಲ್ಲೇ ಹೇರಳವಾಗಿ ದೊರೆಯುತ್ತಿದ್ದ ಕಲ್ಲುಗಳನ್ನು ಬಳಸಿಕೊಂಡಿರುವರು. ಕಲ್ಲು ಮತ್ತು ಮಣ್ಣನ್ನು ಬಳಸಿ ಗೋಡೆ ಕಟ್ಟಲಾಗಿದೆ. ಛಾವಣಿಗಳು ಇಂದು ಕಂಡುಬರುವುದಿಲ್ಲ. ಛಾವಣಿಯನ್ನು ಮರ ಮುಟ್ಟಿನಿಂದ ನಿರ್ಮಿಸಲಾಗಿದ್ದು ಅದು ಎಲ್ಲಾ ಬಿದ್ದು ಹಾಳಾಗಿ ಇದ್ದಿರುವುದಕ್ಕೆ ಅಲ್ಲಿನ ಅವಶೇಷಗಳೇ ಸಾಕ್ಷಿ. ಮನೆಗಳು ವಿಶಾಲವಾಗಿದ್ದು, ದೊಡ್ಡ ದೊಡ್ಡ ಮನೆಗಳೇ ಹೆಚ್ಚು ಇರುವುದರಿಂದ ರಾಜನ ಅಥವಾ ಪಾಳೇಗಾರರ ಪರಿವಾರ ಹಾಗೂ ಉನ್ನತ ಸ್ಥಿತಿಯ ಜನರ ವಾಸಸ್ಥಳವಾಗಿದ್ದುದು ತಿಳಿದುಬರುತ್ತದೆ.

ಒಟ್ಟಿನಲ್ಲಿ ಕರಡಿದುರ್ಗವನ್ನು ಪರಿಶೀಲಿಸಿದಾಗ ಅಲ್ಲಿನ ಕೋಟೆ ಕೊತ್ತಲಗಳು ವಸತಿ ಗೃಹಗಳಿಂದ ಮಧ್ಯಯುಗೀನ ಕಾಲದ ಅಚ್ಚುಕಟ್ಟಾದ ಮನೆಗಳು ಹೇಗಿದ್ದುವೆಂಬುದು ಅದೂ ಅಲ್ಲದೆ ವಿಜಯನಗರ ಕಾಲದ ವಸತಿಗೃಹಗಳನ್ನು ಅಥವಾ ಪಾಳೇಗಾರರ ಕಾಲದ ಮನೆಗಳನ್ನು ಅಧ್ಯಯನ ಮಾಡುವವರಿಗೆ ಕರಡಿದುರ್ಗವು ಒಂದು ಅತ್ಯುತ್ತಮವಾದ ಆಕರ ವಾಗಿ ನಿಲ್ಲಬಲ್ಲದು.

ಕರಡಿದುರ್ಗಕ್ಕೂ ಉಚ್ಚಂಗಿದುರ್ಗಕ್ಕೂ ಸಂಬಂಧವಿದ್ದು ಈ ಕೋಟೆಯನ್ನು ಪಾಳೇಗಾರರು ಪ್ರತ್ಯೇಕವಾಗಿ ವಸತಿ ಪ್ರದೇಶವಾಗಿ ನಿರ್ಮಿಸಿಕೊಂಡಿರಬಹುದಾಗಿ ತಿಳಿದು ಬರುತ್ತದೆ.

## ಉಚ್ಚಂಗಿ ದುರ್ಗದ ಹೊಂಡಗಳು :

ಹೊಂಡವೆಂದರೆ, '' ಕೆರೆಗಿಂತಲೂ ಚಿಕ್ಕದಾದ ಮತ್ತು ಬಾವಿಗಿಂತಲೂ ದೊಡ್ಡದಾದ ತಗ್ಗಾದ ಪ್ರದೇಶದಲ್ಲಿ ಹೆಚ್ಚು ನೀರು ನಿಲ್ಲುವ ಸ್ಥಳಕ್ಕೆ ಸಾಮಾನ್ಯವಾಗಿ ಹೊಂಡವೆಂದರ ಕರೆಯಬಹುದಾಗಿದೆ. ಇದರಲ್ಲಿ ನೈಸರ್ಗಿಕ ಹೊಂಡ ಮತ್ತು ಮಾನವ ನಿರ್ಮಿತ ಹೊಂಡವೆಂಬ ಎರಡು ಭೇದಗಳಿವೆ.''

## ಚಿಕ್ಕ ಹೊಂಡ :

ಉಚ್ಚಂಗಿ ದುರ್ಗದಿಂದ ದಾವಣಗೇರಿಗೆ ಹೋಗುವ ರಸ್ತೆಯ ಪಶ್ಚಿಮ ದಿಕ್ಕಿಗೆ ಇಂದಿನ ಉಚ್ಚಂಗಿ ಕೋಟೆಯ ದಕ್ಷಿಣ ಭಾಗಕ್ಕಿರುವುದೇ ಚಿಕ್ಕ ಹೊಂಡ. ಅದಕ್ಕೆ ಸೀಗೆ ಹೊಂಡವೆಂತಲೂ ಕರೆಯುತ್ತಾರೆ. ಇದು ಯಾವಾಗಲೂ ನೀರಿನಿಂದ ತುಂಬಿರುತ್ತದೆ. ಇದರ ಪೂರ್ವಕ್ಕೆ ಪ್ರಾಚೀನ ಕಾಲದೆನ್ನಲಾಗುವ ನೊಣಬೇಶ್ವರ ದೇವಸ್ಥಾನವಿದ್ದು, ಅದರ ಮುಂಬಾಗದಲ್ಲಿ ಗದ್ದೆಯ ಮಡಿಗಳು ಮತ್ತು ಹೊಂಡದ ದಿಂಡಿನಲ್ಲಿ ಆತ್ಮಾರ್ಪಣೆಯ ಶಿಲ್ಪವೊಂದಿದೆ. ಇದರ ಪಶ್ಚಿಮಕ್ಕೆ ಹಳ್ಳ ಹರಿದುಬರುವ ಜಾಡಿನೊಂದಿಗೆ ಮೇಲೆ ಹೋದರೆ ಬರುವುದೇ ಹಿರೆ ಹೊಂಡ. ಇದರ ಉತ್ತರಕ್ಕೆ ಜೈನ ದೇವಾಲಯವೊಂದು ಇದ್ದು ಭಗ್ನಗೊಂಡ ಮೂರ್ತಿಯೊಂದಿಗೆ ಹಾಳು ಬಿದ್ದಿದೆ. ಸ್ವಲ್ಪ ಮೇಲ್ಭಾಗದಲ್ಲಿ ಶಿವ ದೇವಾಲಯವಿದೆ. ಅದರ ಪಕ್ಕದಲ್ಲಿಯೇ ಊರಿನೊಳಗೆ ಪ್ರವೇಶಿಸಲು ಇಲ್ಲಿಂದ ದಾರಿ ಇದೆ. ಈ ಹೊಂಡದ ದಕ್ಷಿಣಕ್ಕೆ ಚಿಕ್ಕ ಪರ್ವತವಿದೆ. ಹೊಂಡವು ಸುಮಾರು ಮುನ್ನೂರು ಅಡಿ ಉದ್ದ ಮತ್ತು ಮೂನ್ನೂರು ಅಡಿ ಅಗಲ ಇರಬಹುದಾಗಿದೆ.

ಈ ಹೊಂಡದ ನಿರ್ಮಾಣವು ಬಹು ಹಿಂದೆಯೇ ಆಗಿರಬಹುದು. ಆದರ ಜೀರ್ಣೋದ್ಧಾರ ಕಾರ್ಯವು ಪಾಳೇಗಾರರ ಕಾಲದಲ್ಲಿ ನಡೆದಿರಬಹುದಾದ ಕುರುಹುಗಳು ಕಂಡುಬರುತ್ತವೆ. ಈ ಹೊಂಡಕ್ಕೆ ಹಿಂದೆ ಚಿಕ್ಕ ಕಟ್ಟೆಯೆಂತಲೂ, ಕೆರೆಯೆಂತಲೂ[17] ಕರೆದಿರುವುದು ಕಂಡುಬರುತ್ತದೆ.

ಈ ಹೊಂಡವು ಅಣಿಜಿಂಯಿಂದ ಬರುವ ಜನ ಸಮೂಹಕ್ಕೆ ನೀರು ಕುಡಿದು ದಣಿವಾರಿಸಿಕೊಳ್ಳಲು ಅನುಕೂಲವಾಗುವಂತೆ ನಿರ್ಮಿಸಿದ್ದಾರೆ. ಎನ್ನುವುದು ಸ್ಥಳೀಯರ ಅಭಿಪ್ರಾಯವಾಗಿದೆ.

## ಆನೆಹೊಂಡ:

ಉಚ್ಚಂಗಿ ಪರ್ವತದ ಮೇಲೆ ವಿರೂಪಾಕ್ಷದೇವಾಲಯದ ಈಶಾನ್ಯ ದಿಕ್ಕಿಗೆ ಇರುವ ಮತ್ತು ಪೂರ್ವದಿಂದ ಪ್ರವೇಶ ಹೊಂದಿರುವುದೇ ಆನೆಹೊಂಡ. ಇದು ನೋಡಲು ಆಕರ್ಷಣೀಯವಾಗಿದ್ದು ದಕ್ಷಿಣೋತ್ತರವಾಗಿ 50 ಅಡಿಗಳನ್ನು ಮತ್ತು ಪೂರ್ವ ಪಶ್ಚಿಮವಾಗಿ 30 ಅಡಿಗಳನ್ನು ಹೊಂದಿದೆ. ಈ ಹೊಂಡವು ಬಾರಿ ಆಳವೇನೂ ಹೊಂದಿಲ್ಲವಾದರೂ ನೀರು ಇದ್ದೇ ಇರುತ್ತದೆ. ಇದರ ನೈರುತ್ಯಕ್ಕೆ ಉದ್ಯಾನವಿದ್ದ ಅವಶೇಷಗಳಿವೆ. ಅಂದರೆ ಈ ಉದ್ಯಾನದ ಉಪಯೋಗಕ್ಕಾಗಿ ಈ ಹೊಂಡವನ್ನು ನಿರ್ಮಾಣ ಮಾಡಿರ-ಬಹುದು. ಈ ಹೊಂಡಕ್ಕೂ ದೈವಿಕ ಮಹತ್ವವಿದೆ. ಪ್ರತಿ ಹುಣ್ಣಿಮೆಯ ದಿನ ರಾತ್ರಿ ದೇವಿಯನ್ನು ಈ ಹೊಂಡದ ಕಟ್ಟೆಯ ಮೇಲ್ಭಾಗದಲ್ಲಿ ಕುಳ್ಳಿರಿಸಲಾಗುತ್ತದೆ. ಮತ್ತು ಪೂಜಾ ವಿಧಾನಗಳು ನಡೆಯುತ್ತವೆ. ಪಾಳೇಗಾರರ ಅವಧಿಯಲ್ಲಿ ದಾದಯ್ಯನ ರಾಣಿ ಹೊನ್ನಮ್ಮನಾಗತಿ ಈ ಕಟ್ಟೆಯ ಮೇಲೆ ಕುಳಿತುಕೊಳ್ಳುತ್ತಿದ್ದಳು ಎಂಬ ಪ್ರತೀತಿ ಇದೆ. ಪಾಳೆಗಾರರ ಕಾಲದಲ್ಲಿ ಇಲ್ಲಿಯೇ ಆನೆಗಳನ್ನು ನೀರಿಗಾಗಿ ಮತ್ತು ಸ್ನಾನಕ್ಕಾಗಿ ಕರೆತರುತ್ತಿದ್ದರೆಂದು ಸ್ಥಳೀಯರು ಅಭಿಪ್ರಾಯಪಡುತ್ತಾರೆ.

## ಅರಿಶಿಣಹೊಂಡ :

ಉಚ್ಚಂಗಿ ಪರ್ವತದ ಮೇಲೆ ಉಚ್ಚಂಗಿ ದೇವಿ ದೇವಸ್ಥಾನದ ಆಗ್ನೇಯ ದಿಕ್ಕಿನಲ್ಲಿ ಮತ್ತು ಅರಸನ ಅರಮನೆಯ ಪೂರ್ವದಲ್ಲಿರುವುದೇ ಅರಷಿಣಹೊಂಡ. ಇದು ಉತ್ತರ ದಕ್ಷಿಣವಾಗಿ ಸುಮಾರು 50 ಅಡಿ ಹಾಗೂ ಪೂರ್ವ ಪಶ್ಚಿಮವಾಗಿ ಸುಮಾರು 20 ಅಡಿ ಇದ್ದು, ಅರಮನೆಯ ಪಕ್ಕದಿಂದ ನೋಡಿದರೆ ಭಯಾನಕತೆಯನ್ನು ಮೂಡಿಸುತ್ತದೆ. ಇದು ಯಾರ ಕಾಲದ್ದೆಂದು ಹೇಳಲು ಸರಿಯಾದ ಆಧಾರಗಳಿಲ್ಲವಾದರೂ ಪಾಂಡ್ಯರ ಕಾಲದಿಂದಲೂ ಇದ್ದು ಮುಂದೆ ಪಾಳೇಗಾರರು ದೊಡ್ಡದಾಗಿಸಿ ಬಳಸಿಕೊಂಡಿರಬಹುದಾಗಿದೆ. ಇದರ ನೀರಿನ ಬಣ್ಣ ಯಾವಾಗಲೂ ಹಳದಿಯಾಗಿ ಇರುವುದರಿಂದಲೋ ಏನೋ ಅರಿಶಿಣ ಹೊಂಡ ಎಂಬ ಹೆಸರು ಬಂದಿದೆ. ಹಸಿರು ಹಳದಿ ಮಿಶ್ರ ಬಣ್ಣದ ಈ ನೀರು ಎಂತಹ ಬರಗಾಲದಲ್ಲಿಯೂ ಬತ್ತಿದ ದಾಖಲೆಗಳು ಕಡಿಮೆ. ಪ್ರತಿದಿನ ಉಚ್ಚಂಗಿ ದೇವಿಯ ಪೂಜೆಗೆ

ಇದೇ ನೀರು ಬಳಸುತ್ತಾರೆ ಮತ್ತು ಅಲ್ಲಿಯ ಎಲ್ಲಾ ಜನರು ಕುಡಿಯುವುದು ಇದೇ ನೀರನ್ನೇ. ಇದು ಎರಡು ಭಾಗದಲ್ಲಿ ಮಾತ್ರ ಕಟ್ಟಡ ಹೊಂದಿರುವಂತೆ ಭಾಸವಾಗುತ್ತದೆ.

**ಹೊಸಹೊಂಡ :**

ಉಚ್ಚಂಗಿ ದುರ್ಗದ ಬೆಟ್ಟದ ಕೆಳಗಣ ಪೂರ್ವ ಭಾಗದಲ್ಲಿರುವುದೇ ಹೊಸಹೊಂಡ. ಹೆಸರೇ ಸೂಚಿಸುವಂತೆ ಹೊಸದಾದುದರಿಂದ ಇದಕ್ಕೆ ಹೊಸ ಹೊಂಡವೆಂದು ಕರೆಯುತ್ತಾರೆ. ಕಲ್ಲಿನ ಕಟ್ಟಡ ಎತ್ತರಕ್ಕೆ ಇದ್ದು ನೀರು ಶೇಖರಣೆಗೊಳ್ಳುತ್ತದೆ. ಊರಿನ ದನ ಕರು ಗಳಿಗೆ ಉಪಯೋಗವಾಗುತ್ತಿದೆ. ಬೇಸಿಗೆಯಲ್ಲಿ ಬತ್ತಿ ಹೋಗುತ್ತದೆ. ಮಳೆಗಾಲದಲ್ಲಿ ಮಾತ್ರ ನೀರು ಯಾವಾಗಲೂ ಇರುತ್ತದೆ. [illegible] ಸುಮಾರು 8 ಅಡಿ ಆಳ ಇರುವ ಇದು ಬೆಟ್ಟದ ಮೇಲಿನಿಂದ ನೋಡಲು ಬಹಳ ಆನಂದವಾಗುತ್ತದೆ.

**ಸಗಣಿ ಹೊಂಡ :**

ಉಚ್ಚಂಗಿ ದುರ್ಗದ ಬೆಟ್ಟದ ಮೇಲೆ ರಾಣಿಯ ಅರಮನೆಯ ಎಡಗಡೆಯ ಮುಂಬಾಗದಲ್ಲಿರುವುದೇ ಸಗಣಿಹೊಂಡ. ಹೆಸರೇ ಸೂಚಿಸುವಂತೆ ಸಗಣಿಯ ನೀರನ್ನೇ ಇದರಲ್ಲಿ ತುಂಬಿಸುತ್ತಿದ್ದುದು ಸ್ಥಳೀಯರಿಂದ ತಿಳಿದುಬರುತ್ತದೆ. ಇದು ಸುಮಾರು 50 ಅಡಿ ದಕ್ಷಿಣೋತ್ತರವಾಗಿದೆ. ಇದರ ಮೇಲ್ಭಾಗದಲ್ಲಿ ಒಂದು ಕಲ್ಲು ಬಾವಿಯಾಕಾರದ ತಗ್ಗು ಇರುವುದು. ಸಗಣಿ ಹೊಂಡವು ಕಲ್ಲು ಕಟ್ಟಡವನ್ನು ಹೊಂದಿದೆ. ಅದಕ್ಕೆ ಗಾರೆಯ ಉಪಯೋಗ ಮಾಡಿದ್ದಾರೆ.

**ಹೊನ್ನೆಹೊಂಡ :**

ಉಚ್ಚಂಗಿ ದುರ್ಗದ ಬೆಟ್ಟದ ಕೆಳಭಾಗದ ಮಧ್ಯೆ, ಚೌತ ಕಟ್ಟೆಯ ಉತ್ತರಕ್ಕಿರುವುದೇ ಹೊನ್ನೆಹೊಂಡ. ಹೊನ್ನುಮ್ಮನಾಗತಿಯು ಜಾರಿ ಬಿದ್ದು ಸತ್ತಿದ್ದರಿಂದ ಈ ಹೊಂಡಕ್ಕೆ ಆ ಹೆಸರು ಬಂದಿತ್ತೆಂದು ಪ್ರತೀತಿ ಇದೆ. ಮಳೆ ಬಂದಾಗ ಬೆಟ್ಟದಿಂದ ನೀರು ಬಂಡೆಗಳ ಮೂಲಕ ಹರಿದು ಇಲ್ಲಿ ಶೇಖರಿಸಲ್ಪಡುತ್ತದೆ. ಈ ಹೊಂಡದ ಉತ್ತರಕ್ಕೆ ಒಂದು ಕಲ್ಲು ಬಾವಿ ಇದೆ. ಇದರಲ್ಲಿ ನೀರು ಒಣಗುವುದೇ ಇಲ್ಲವಂತೆ. ಈ ಬಾವಿಯಿಂದ ಮೇಲೆಕ್ಕೆ ನೋಡಿದರೆ ಬಂಡೆಯ ಭಯಾನಕತೆಯನ್ನು ಮೂಡಿಸುತ್ತದೆ. ಇದರ ಆಗ್ನೇಯ ದಿಕ್ಕಿಗೆ ಹಾ ಆಲದ ಮರಗಳ ತೋಪು ಇರುವುದು ಕಂಡುಬರುತ್ತದೆ. ಮುಂದೆ ಸಾಗಿದರೆ ಕೋಟೆಯ ಮೂಲಕ ಒಳಗೆ ಪ್ರವೇಶದ [illegible] ಇದ್ದು ಹೊಂಡದ ದಕ್ಷಿಣಕ್ಕೆ ಪ್ರಾಚೀನ ಕಾಲದಿನ್ನುಳಾದ ದೇವಾಲಯದ ಅವಶೇಷಗಳು ಇದ್ದಿವೆ. ಈ ಹೊಂಡವು ಸುಮಾರು

300 ಅಡಿ ಉತ್ತರ ದಕ್ಷಿಣವಾಗಿ 200 ಅಡಿ ಪೂರ್ವ ಪಶ್ಚಿಮವಾಗಿ ಹಬ್ಬಿದೆ.

ಊರಿನ ಜನರು ಇದರಲ್ಲಿ ಬಟ್ಟೆ ತೊಳೆಯುತ್ತಾರೆ. ವಿಶೇಷವಾಗಿ ಕೋಟೆಯೊಳಗಿರುವ ವಾಲ್ಮೀಕಿ ಜನಾಂಗದವರು ಇದರ ಉಪಯೋಗ ಹೆಚ್ಚು ಮಾಡಿಕೊಳ್ಳುತ್ತಾರೆ. ಇದರ ಸುತ್ತಲೂ ಕಲ್ಲಿನ ಕಟ್ಟೆ ಕಟ್ಟಲಾಗಿದೆ. 8 ರಿಂದ 10 ಅಡಿ ಆಳವನ್ನು ಹೊಂದಿದೆ.

ಹಿರೇಹೊಂಡ:

ಉಚ್ಚಂಗಿ ದುರ್ಗದ ನೈರುತ್ಯ ದಿಕ್ಕಿಗೆ ಇರುವುದೇ ಹಿರೇಹೊಂಡ. ಇದು ಅತೀ ಪ್ರಾಚೀನದ್ದಿರಬಹುದು. ಕಾರಣ ಇದರ ಸುತ್ತಲೂ ಹಳೆಯ ಕಾಲದಲ್ಲಿ ನಿರ್ಮಾಣವಾಗಿರಬಹುದಾದ ಕಲ್ಲು ಶಿಲ್ಪಗಳು, ಶಿಲೆಗಳ ಅವಶೇಷಗಳ ಕಂಡುಬರುತ್ತವೆ. ಚಿಕ್ಕ ಹೊಂಡದ ಆವರಣದಲ್ಲಿರುವ ಶಾಸನದಲ್ಲಿ ಹೀಗಿದೆ. "ಶ್ರೀ ವಿಷ್ಣುವರ್ಧನ ಮಹಾರಾಜ ವಿಜಯಾದಿತ್ಯ ದೇವರು ನೊಳಂಬವಾಡಿ 32000 ವನ್ನು ಸುಖದಿಂದ ಆಳುತಿರಲು ಕ್ರಿ.ಶ 1064ನೆಯ ಕ್ರೋಧಿ ಸಂವತ್ಸರದ ಚೈತ್ರದ ಹುಣ್ಣಿಮೆ ಆದಿತ್ಯವಾರದಂದು ಮದನ(ಪರ್ವ) ಹಬ್ಬದ ನಿಮಿತ್ತ ಸೂಳೆವಾಳಿ ಮಾರಯ್ಯರ ದೇವಗೆರ್ಗ ಉಚ್ಚಂಗಿಯ ಕೋಟೆಯ ನೈರುತ್ಯದ ದೆಳೆಯ ಪಡುವಳ ಗೆರೆಯ ಕೆಳಗಣ ಗದ್ದೆಯ ನಿರ್ಮಾಣದಿಂದ" ಇತ್ಯಾದಿ ಬರುತ್ತದೆ. ಇದರಲ್ಲಿ ಈ ಹೊಂಡಕ್ಕೆ ಕೆರೆ ಎಂದು ಹೆಸರು ಇರುವುದು ತಿಳಿಯುತ್ತದೆ.

ಒಟ್ಟಿನಲ್ಲಿ ಹಳೆಯದಾದ ಈ ಹೊಂಡದಲ್ಲಿ (ಕಮಲ) ತಾವರೆ ಹರಳುತ್ತವೆ ಎಂದು ಸ್ಥಳೀಯರು ಹೇಳುವುದು ಕಂಡುಬರುತ್ತದೆ. ವಿಶಾಲವಾದ ಈ ಹೊಂಡದಿಂದ ಕೋಟೆಯ ಮೇಲೆ ನೀರ[illegible]ಗಿಸುತ್ತಿರಬಹುದಾದ ದಾರಿಯ ಗುರುತು ಹಾಗೂ ಕಲ್ಲುಗಳ ಜೋಡಣೆಯು ಸವೆದಿರುವುದು ಕಂಡುಬರುತ್ತದೆ. ಈ ಹೊಂಡದ ಪೂರ್ವಕ್ಕೆ ಚಿಕ್ಕ ಹೊಂಡವಿದ್ದು, ಪಶ್ಚಿಮಕ್ಕೆ ನೀರಿನ ಹರಿ ಇದೆ. ಹಾಗೂ ಉತ್ತರಕ್ಕೆ ಕೋಟೆ ಇದ್ದು ದಕ್ಷಿಣಕ್ಕೆ ದೇವಾಲಯಗಳ ಅವಶೇಷಗಳಿವೆ.

## ಉಚ್ಚಂಗಿ ದುರ್ಗದ ಬಾವಿಗಳು :

ಸಮೃದ್ಧಿಯ ಸಂಕೇತವೇ ಬಾವಿ. ನೀರಿನ ಸೌಕರ್ಯ ಎಲ್ಲಿದೆಯೋ ಅಲ್ಲಿ ಸಮೃದ್ಧಿ ಇದೆ. ಅಲ್ಲಿ ಮಾನವ ನೆಲಸಿದ್ದಾನೆ. ಬಾವಿಯ ಇತಿಹಾಸ ಅತ್ಯಂತ ಪ್ರಾಚೀನವಾದುದು. ಭೂಮಿಯ ಮೇಲ್ಭಾಗದಲ್ಲಿ ನೀರು ಸಿಗದಿದ್ದಾಗ, ಭೂಮಿಯನ್ನು ಅಗೆದು ಅದಕ್ಕೊಂದು ಸ್ವರೂಪವನ್ನು ಮನುಷ್ಯ ಕೊಟ್ಟಿದ್ದಾನೆ ಅದೇಬಾವಿ. ಬಾವಿಯ ಸುತ್ತ ವಾಸಿಸುವ ಜನಾಂಗ, ಕೇರಿ ಅಥವಾ ಊರು ಆ ಹೆಸರುಗಳಿಂದಲೇ, ಬಾವಿಗಳು ಹೆಸರಿಸಲ್ಪಟ್ಟಂತೆ ಕಟ್ಟಿಸಿದ ವ್ಯಕ್ತಿಯ ಅಥವಾ ಆ ಪ್ರದೇಶದ ವ್ಯಕ್ತಿಯ ಹೆಸರುಗಳಿಂದಲೂ ಕರೆಯಲ್ಪಡುತ್ತಿದ್ದುವು. ಉಚ್ಚಂಗಿದುರ್ಗದ ಬಾವಿಗಳ ಅಲ್ಪ ಪರಿಚಯವನ್ನು ಇಲ್ಲಿ ನೀಡಲೆತ್ನಿಸಿದೆ.

ಉಚ್ಚಂಗಿದುರ್ಗದಿಂದ ದಾವಣಗೆರೆಗೆ ಹೋಗುವ ರಸ್ತೆಯ ಎಡ ಪಾರ್ಶ್ವದಲ್ಲಿ ಬಸ ನಿಲ್ದಾಣಕ್ಕೆ ಒಂದು ಫರ್ಲಾಂಗ ದೂರದಲ್ಲಿರುವುದೇ ಅರಸನ ಬಾವಿ. ಇದನ್ನು ಪಾಳೇಗಾರರು ನಿರ್ಮಿಸಿದ್ದಾರೆ ಎಂದು ಸ್ಥಳೀಯರು ಅಭಿಪ್ರಾಯ ಪಡುತ್ತಾರೆ. ಇದನ್ನು ಬರೀ ಕಲ್ಲಿನಲ್ಲಿ ಕೆತ್ತಲಾಗಿದೆ. ಮತ್ತು ಕಲ್ಲುಗಳನ್ನು ವ್ಯವಸ್ಥಿತವಾಗಿ ಜೋಡಿಸ-ಲಾಗಿದೆ. 22 ಅಡಿ ಆಳದ ಮಟ್ಟವನ್ನು ಹೊಂದಿದೆ ಎಂಬುದು ಅಲ್ಲಿಯವರ ಅಭಿಪ್ರಾಯ. ಮೆಟ್ಟಿಲುಗಳಿಂದ ಕೂಡಿದ್ದು ಸುತ್ತಲೂ ಇಳಿಯುವ ಸೌಲಭ್ಯವಿದೆ. ಅಲ್ಲದೆ ಪಶ್ಚಿಮ ದಿಕ್ಕಿಗೆ ವಿಶೇಷವಾಗಿ ಪ್ರವೇಶವಿದೆ. ಆಯತಾಕಾರವಾದ ಇದು ಸುಂದರವಾಗಿ ಕಾಣುತ್ತದೆ. ಇದರ ಪೂರ್ವಭಾಗದ ಮೆಟ್ಟಿಲಿನ ಮೇಲ್ಭಾಗದಲ್ಲಿ ಗಣೇಶನ ವಿಗ್ರಹವೂ ಇದ್ದು ಸ್ವಲ್ಪ ಮುಂದೆ ಅಜ್ಜನ ಮರವೆಂದು [illegible]ರೆಯಲ್ಪಡುವ ಸಮಾಧಿ ಇದೆ. ಇದರ ಆಗ್ನೇಯಕ್ಕೆ ಬನಶಂಕರಿ ದೇವಾಲಯ ಪ[illegible]ಕ್ಕೆ ರಸ್ತೆ ಮತ್ತು ರೈತರ ಕಣಗಳು ಇರುವುವು. ಇದರ ಸುತ್ತಲಿನ ಜನತೆ ಈ ನೀರ[illegible] ಬಳಸುತ್ತಾರೆ. ಬಾವಿಯ ಲಕ್ಷಣಗಳು ಸ್ಥಳೀಯರ ಅಭಿಪ್ರಾಯಗಳು ಇತ್ಯಾದಿ ಗಮನಿಸಲಾಗಿ ಇದು ವಿಜಯನಗರದ ನಂತರ ಕಾಲದಲ್ಲಿ ನಿರ್ಮಾಣವಾಗಿರುವುದು ಎಂದು ತಿಳಿದುಬರುತ್ತದೆ.

ಈ ಬಾವಿಯ ಈಶಾನ್ಯ ದಿಕ್ಕಿನ ಸ್ವಲ್ಪ ಅಂತರದಲ್ಲಿಯೇ ಹೊನ್ನಮ್ಮ ನಾಗತಿಯ ಸಮಾಧಿ ಎಂದು ಸ್ಥಳೀಯರು ಗುರುತಿಸುವ ಕಟ್ಟಡವೊಂದಿದೆ. ಇದರ ದಕ್ಷಿಣಕ್ಕೆ ವಿಜಯನಗರದ ನಂತರದೇ ಆದ ವೀರಭದ್ರ ದೇವಸ್ಥಾನವು ಕಂಡುಬರುವುದು.

ಉದ್ದಂಗಿ ಕೋಟೆಯ ಮಧ್ಯದ ರಾಜ ಬೀದಿ ಎಂದು ಕರೆಯಲ್ಪಡುವ ಮಾರ್ಗದ ದಕ್ಷಿಣಕ್ಕಿರುವುದೇ ಕಟ್ಟೆಬಾವಿ. ಇದೂ ಪಾಳೇಗಾರರ ಕಾಲದ್ದೆಂದು ಸ್ಥಳೀಯರ ಅಭಿಪ್ರಾಯವಾಗಿದೆ. ಗ್ರಾನೈಟ್ ಕಲ್ಲಿನಿಂದ ನಿರ್ಮಿತವಾಗಿದೆ. ಆಯತಾಕಾರವಾದ ಇದು ಅಗಲವಾದ ಕಲ್ಲು ಬಂಡೆಗಳನ್ನು ಇದರ ಕಟ್ಟಡಕ್ಕೆ ಬಳಸಲಾಗಿದೆ. ಸುತ್ತಲೂ 10x10 ಅಳತೆಯ ಕಟ್ಟೆಯು ಕಲ್ಲಿನಿಂದಲೇ ನಿರ್ಮಾಣಗೊಂಡಿದೆ. ಕಟ್ಟೆಯು ನೆಲಮಟ್ಟದಿಂದ ಸುಮಾರು 3 ಅಡಿ ಎತ್ತರವಿದೆ. ಇದರ ಮೇಲೆ ಬಾವಿಯ ಕಟ್ಟಡ 3 ಅಡಿ ಇದೆ. ಇದಕ್ಕೆ ಗಡೇವು ಇಲ್ಲ ಪಶ್ಚಿಮ ದಿಕ್ಕಿನಿಂದ ಮೇಲೇರಲು ಮೆಟ್ಟಲುಗಳಿವೆ. ಬಯಲುಬಾವಿಯಾಗಿದ್ದು 4x4 ಚದುರತೆಯನ್ನು ಬಾವಿಯ ಒಳಮೈ ಹೊಂದಿದೆ. ತುಂಬ ಕಿರಿದಾದ ಸುಮಾರು 30 ಅಡಿ ಆಳವಾದ ಇದು ಇದರಲ್ಲಿ ನೀರು ಇಲ್ಲದಿರುವುದು ಕಂಡುಬರುತ್ತದೆ. ಇದರ ಪೂರ್ವಕ್ಕೆ ಕಣಜದ ಕಟ್ಟಡವೂ ಇದೆ. ಭಾವ ಚಿತ್ರದಲ್ಲಿ ಕೊಡಲಾಗಿದೆ. ಉದ್ದಂಗಿ ಕೋಟೆಯ ಮಧ್ಯದ ಹೊನ್ನೆಹೊಂಡದ ಉತ್ತರಕ್ಕಿರುವುದೇ ಕಲವೀರನ ಬಾವಿ. ಕಲ್ಲುಬಾವಿ ಎಂತಲೂ ಕರೆಯುತ್ತಾರೆ. ಇದರ ಮೇಲ್ಭಾಗದಲ್ಲಿ ಬೃಹದಾಕಾರವಾದ ಬಂಡೆ ಇದಕ್ಕೆ ಹೊನ್ನೇ ರಛುರಿ ಎಂತಲೂ ಕರೆಯುತ್ತಾರೆ. ಹೆಸರೇ ಸೂಚಿಸುವಂತೆ ಕಲ್ಲುಗಳಿಂದ ನಿರ್ಮಾಣಗೊಂಡಿರುವುದು. ಇದು ಬಯಲು ಬಾವಿಯಾಗಿದ್ದು, ಇದರಲ್ಲಿ ಯಾವಾಗಲೂ ನೀರು ಇರುತ್ತದೆಂದು ಊರಿನವರು ಹೇಳುತ್ತಾರೆ.

ಬಟ್ಟಲಬಾವಿ ವಿರೂಪಾಕ್ಷಿ ದೇವಾಲಯದ ಉತ್ತರಕ್ಕೆ ಇದ್ದು ತುಂಬಾ ಆಳವಾಗಿದೆ ಎಂದು ಸ್ಥಳೀಯರು ಅಭಿಪ್ರಾಯಪಡುತ್ತಾರೆ. ಇದರ ಉತ್ತರಕ್ಕೆ ಪಾಂಡ್ಯರ ಕಾಲದ ಬಂಡೆ ಶಾಸನವಿದ್ದು ಇದೇ ಬಂಡೆಯಲ್ಲಿ ಈ ಬಾವಿ ಕೊರೆಯಲ್ಪಟ್ಟಿರುವುದು. ಇಲ್ಲಿ ಸ್ಥಳೀಯರು ಸ್ನಾನ, ಬಟ್ಟೆಯನ್ನು ಸ್ವಚ್ಛಗೊಸಿಕೊಳ್ಳುತ್ತಾರೆ.

ತೊಟ್ಟಿಲಬಾವಿಯು ಬಟ್ಟಲಬಾವಿಯಿಂದ ಉತ್ತರದ ಮೇಲ್ಭಾಗಕ್ಕೆ ಇದ್ದು ಇದೇ ಬಂಡೆಯಲ್ಲಿ ಕೊರೆಯಲ್ಪಟ್ಟಿದೆ. ತೊಟ್ಟಿಲ ಆಕಾರವಿರುವದರಿಂದ ಇದಕ್ಕೆ ಈ ಹೆಸರೇ ಬಂದಿದೆ. ಇನ್ನು ಊರಿನಲ್ಲಿ ಅನೇಕ ಬಾವಿಗಳಿವೆ. ಕೆಲವು ಬಾವಿಗಳ ಪ್ರಮುಖ ಹೆಸರುಗಳನ್ನು ಮಾತ್ರ ತಿಳಿಸಲಾಗುತ್ತಿದೆ. ಕೃಷ್ಣನ ಬಾವಿ ಮತ್ತು ಕತ್ರಿಯ ಬಾವಿ ಗಡಗನ, ಮಸೀದಿ ಬಾವಿಗಳಲ್ಲದೇ ಅನೇಕ ನೀರು ಸೇದುವ ಬಾವಿಗಳಿವೆ.

## ಉಚ್ಚಂಗಿ ದುರ್ಗದ ಕಟ್ಟೆಗಳು :

ಇತಿಹಾಸದ ಓದುಗರಿಗೆ, ಸಂಶೋಧಕರಿಗೆ ಕಟ್ಟೆಗಳು ಮಹತ್ವಪೂರ್ಣವಾದ ಮಾಹಿತಿಯನ್ನು ಒದಗಿಸುತ್ತವೆ. ವ್ಯಕ್ತಿ, ದೇವರ, ಪ್ರದೇಶದ ಹೆಸರಿನಿಂದ ಗುರುತಿಸಲ್ಪಡುವ ಇವು ಉಚ್ಚಂಗಿ ದುರ್ಗದಲ್ಲಿಯೂ ಕಂಡುಬರುತ್ತವೆ.

ಅಗಸನಕಟ್ಟೆ, ಅಗಸರು ಹೆಚ್ಚಾಗಿ ಉಪಯೋಗಿಸುತ್ತಿದ್ದ ಈ ಹೊಂಡಕ್ಕೆ ಅಗಸನ ಅಥವಾ ಅಗಸರ ಕಟ್ಟೆಯೆಂದು ಕರೆಯುತ್ತಾರೆ. ದ್ಯಾಮವ್ವನ ಕಟ್ಟೆ ಇದು ಒಬ್ಬ ಸ್ತ್ರೀಯಿಂದ ಗುರುತಿಸಲ್ಪಟ್ಟಿದೆ. ಒಡ್ಡನ್ನು ಹಾಕಿ ನೀರು ನಿಲ್ಲಿಸಲಾಗಿದೆ. ಇದು ಊರಿನ ಉತ್ತರ ಭಾಗಕ್ಕೆ ಬರುತ್ತದೆ. ಬೀರನ ಕಟ್ಟೆ : ಬೀರ ಎನ್ನುವಾತ ಕುರುಬ ಜನಾಂಗದ ವ್ಯಕ್ತಿಯಿಂದಲೇ ಈ ಕಟೆ ಗುರುತಿಸಲ್ಪಟ್ಟಿದೆ. ಉಚ್ಚಂಗಿಯಲ್ಲಿ ಕುರುಬರೇ ಬಹು ಸಂಖ್ಯಾತರು ಇರುವರು. ಬೀರ ಎನ್ನುವ ವ್ಯಕ್ತಿ ನಾಮದವರು ತುಂಬಾ ಇದ್ದಾರೆ. ಪಾದಗಟ್ಟ – (ಪಾದಕಟ್ಟ) ಇಲ್ಲಿ ಉತ್ಸವಾಂಭದೇವಿಯ ಪಾದಗಳು ಇರುವದರಿಂದ ಇದಕ್ಕೆ ಪಾದಗಟ್ಟ ಎಂದೇ ಹೆಸರು ಬಂದಿದೆ. ಉಚ್ಚಂಗಿ ದುರ್ಗದ ಬಸ ನಿಲ್ದಾಣದ ಬಲ ಭಾಗದಲ್ಲಿದೆ. ಎಡ ಭಾಗದಲ್ಲಿ ಓಕುಳಿ ಕಟ್ಟ ಇದೆ. ಇದು 20x20 ಚದುರತೆ ಹೊಂದಿ ಕೆಳಭಾಗದಲ್ಲಿ ಕಿರಿದಾಗುತ್ತಾ 9 ಹಂತದ ಮೆಟ್ಟಲುಗಳನ್ನು ಹೊಂದಿದೆ. ಇದರ ಮೇಲೆ ಆರು ಕಂಬಗಳಿವೆ. ಇದು ಪಾದಗಟ್ಟೆಯ ಎದುರು ಭಾಗದಲ್ಲಿದೆ. ಇಲ್ಲಿ ಓಕುಳಿ ಆಡುತ್ತಾರೆ.

## ದೇವಿಕಟ್ಟೆ ಅಥವಾ ಗದ್ದುಗೆಕಟ್ಟೆ :

ಉಚ್ಚಂಗಿ ದುರ್ಗದ ಕೋಟೆಯ ಒಳಭಾಗದ ಕೋಟೆಯ ಪ್ರವೇಶ ದ್ವಾರಗಳನ್ನು ದಾಟಿ ಮುಂದೆ ಸಾಗಿದರೆ ಸಿಗುವುದೇ ಗದ್ದುಗೆ ಕಟ್ಟೆ. ಇಲ್ಲಿ ಉಚ್ಚಂಗೆಮ್ಮನನ್ನು ಗದ್ದುಗೆ ಮಾಡಿಕೊಳ್ಳಿರಿಸ ರಂತೆ. ಇದಕ್ಕೆ ಗದ್ದುಗೆ ಅಥವಾ ದೇವಿಯ ಕಟ್ಟೆ ಎಂದು ಕರೆಯುತ್ತಾರೆ. ಇಲ್ಲಿ ಒಂದು ಕೋಣವನ್ನು ಹಿರೇ ಹಬ್ಬದಲ್ಲಿ ಬಲಿಕೊಡುತ್ತಾರೆ. ಇದರ ಮುಂಭಾಗದಲ್ಲಿ ಕೋಟೆಯೊಳಗಿನ ಊರಿನವರು ಕುರಿ, ಕೋಳಿ, ಮೇಕೆಯ ತಲೆ ಕತ್ತರಿಸಿಕೊಂಡು ಹೋಗುತ್ತಾರೆ. ಇದರ ಹಿಂಭಾಗದಲ್ಲಿ 8 ಮತ್ತು 9 ನೇ ಶತಮಾನದ ಕಾಲಕ್ಕೆ ಸೇರಬಹುದಾದ ಕಲ್ಲಿನ ಕೆತ್ತನೆ ಅವಶೇಷಗಳು, ದೇವಾಲಯದ ಕಂಬಗಳು ಕಂಡುಬರುತ್ತವೆ. ಇದರ ವರುಣ ದಿಕ್ಕಿಗೆ ಸಿದ್ದೇಶ್ವರ ಮಠವಿದೆ.

ಇದರ ಸುತ್ತಲೂ ಅನೇಕ ಅವಶೇಷಗಳು ಕಂಡುಬರುತ್ತವೆ. ಈ ದೇವಿ ಕಟ್ಟೆಯಲ್ಲಿ ಶಾಸನ ಪಾಠ ಹೀಗಿದೆ. ಶ್ರೀ ವಿರೂಪಾಕ್ಷ ಗುರುಲಿಂಗ ಜಂ ಮಶ್ರೀ ಮಿಗ(ಗ?) ಕಂಬಕೆರಿ ಚರಂತಿ ಮಠದವರಿಗೆ ಕಟ್ಟಿಸಿದ ಲಿಂಗವತರನ ಭ ಲಿ ಶತಣಯ..... ಎಂದಿದೆ.

ಆನೆಹೊಂಡದ ಕಟ್ಟೆ :

ಆನೆ ಹೊಂಡದಲ್ಲಿರುವುದರಿಂದ ಇದಕ್ಕೆ ಆ ಹೆಸರೇ ಬಂದಿದೆ. ಪ್ರತಿ ಹುಣ್ಣಿಮೆಗೆ ಉತ್ಸವಾಂಭ ಇಲ್ಲಿ ಬಂದು ಆಸೀನಳಾಗುತ್ತಾಳೆ. ಆನೆಹೊಂಡದ ವಿಶೇಷ ಪೂಜೆ ಜರುಗುತ್ತದೆ.

ಜೋಗತಿಕಟ್ಟೆ :

ಜೋಗತಿಯರು ಇಲ್ಲಿ ಬಂದು ಹೋಗುವದರಿಂದ ಇದಕ್ಕೆ ಅದೇ ನಾಮ ಬಂದಿದೆ. ರಾಣಿ ಅರಮನೆಯ ಆಗ್ನೇಯ ದಿಕ್ಕಿಗೆ ಇದೆ. ಇಲ್ಲಿ ಪಡ್ಲಗಿಗೆಗಳು, ಕೂದಲು ಗಳು ದೇವತೆ ಫೋಟೋಗಳು ಹರಡಿ ಬಿದ್ದಿರುವುದು ಕಂಡು ಬರುತ್ತದೆ. ಜೋಗತಿಗಳು ಸತ್ತ ಮೇಲೆ ಅವರ ಪಡ್ಲಗಿ, ಕೂದಲು ಫೋಟೋ ಇಲ್ಲಿ ತಂದು ಹಾಡುತ್ತಾರೆ. ಇದು 8×8 ಚದರು ಅಡಿ ಹೊಂದಿದೆ.

ನ್ಯಾಯ ದಾನದ ಕಟ್ಟ :

ಗದ್ದುಗೆ ಕಟ್ಟೆಯ ಮುಂಭಾಗವಾಗಿ ನಡೆದುಕೊಂಡು ಹರಿಹರದ ಬಾಗಿಲ ಕಡೆ ಹೊಳಗುಡಿ ಎಡಭಾಗದಲ್ಲಿರುವುದೇ ನ್ಯಾಯದಾನದ ಕಟ್ಟೆ. ಹಿಂದೆ ಪಾಳೆಗಾರರ ಕಾಲದಲ್ಲಿ ತಪ್ಪು ಮಾಡಿದವರನ್ನು ವಿಚಾರಿಸಲಾಗುತ್ತಿತ್ತಂತೆ. ಶಿಕ್ಷೆಯನ್ನು ಇಲ್ಲಿ ಕೊಡುತ್ತಿದ್ದರಿಂದ ಇದಕ್ಕೆ ನ್ಯಾಯ ದಾನದ ಕಟ್ಟೆ ಎಂದು ಕರೆದುಕೊಂಡು ಬಂದಿರುವರು. ಕೆಲವು ಪ್ರಮುಖ ಕಟ್ಟೆಗಳನ್ನು ಮಾತ್ರ ಇಲ್ಲಿ ಚರ್ಚಿಸಲಾಗಿದೆ. ಹೀಗೆ ಕಟ್ಟೆಗಳು ನಮಗೆ ಮಹತ್ವ ಪೂರ್ಣವಾದ ಮಾಹಿತಿ ನೀಡಲು ಕೇಂದ್ರಗಳಾಗಿವೆ.

ಅರಮನೆಗಳು :

ಸಾಮಾನ್ಯವಾಗಿ ಅರಮನೆಗಳೆಂದರೆ ಅರಸರು ವಾಸಿಸುತ್ತಿದ್ದ ಮನೆಗಳೆಂದು ಗುರುತಿಸುತ್ತೇವೆ. ದೊಡ್ಡ ಕಟ್ಟಡವನ್ನು ಹೊಂದಿರುವ ಮನೆಗಳಿಗೆ ಅರಮನೆ ಎಂದು ಕರೆಯುವ ವಾಡಿಕೆಯೂ ಉಂಟು.

ಉಚ್ಚಂಗಿದುರ್ಗದ ಬೆಟ್ಟದ ಮೇಲೆ, ಕೋಟೆಯ ಒಳಗಡೆ ಎರಡು ಅರಮನೆಗಳಿದ್ದ ಕಟ್ಟಡವಾಶೇಷಗಳು ಕಂಡುಬರುತ್ತವೆ. ಉಚ್ಚಂಗೆಮ್ಮ ದೇವಾಲಯದ ದಕ್ಷಿಣಕ್ಕೆ ಸು. 100 ಮೀ. ಅಂತರದಲ್ಲಿರುವುದೇ ರಾಜನ ಅರಮನೆ. ಇದು ಉತ್ತರದ ಕಡೆ ಪ್ರವೇಶದ್ವಾರವನ್ನು ಹೊಂದಿರುತ್ತದೆ. ಉಚ್ಚಂಗೆಮ್ಮ ದೇವಾಲಯ ಹಾಗೂ ಈ ಅರಮನೆಯು ಪರಸ್ಪರ ಅಭಿಮುಖವಾಗಿರುವವು ಮತ್ತು ಹತ್ತಿರದಲ್ಲಿರುವದರಿಂದ ದೇವಸಾಧ್ಬದ ಬಳಿಯೇ ಯೋಗ್ಯಸ್ಥಳವೆಂದು ಈ ಅರಮನೆ ನಿರ್ಮಾಣಗೊಂಡಿರಬಹುದು. ಅಥವಾ ಅರಮನೆಗ ಹತ್ತಿರದಲ್ಲಿರುವಂತೆ ಈ ದೇವಾಲಯವನ್ನು ನಿರ್ಮಾಣ ಮಾಡಿಕೊಂಡಿರಲೂ ಬಹುದು. ಉಚ್ಚಂಗೆಮ್ಮ ದೇವಾಲಯದ ದಕ್ಷಿಣ ಭಾಗದ ಗೋಡೆಗೆ ಒರಗಿಸಿರುವ ಶಾಸನ ಮತ್ತು ಶಿಖರದಲ್ಲಿನ ಶಾಸನ ವಿಜಯನಗರದ ಕಾಲಕ್ಕೆ ಸೇರಿದವುಗಳಾಗಿವೆ. ಅಲ್ಲದೆ ಈ ಅರಮನೆ ಹಾಗೂ ದೇವಾಲಯದ ಸಂಬಂಧ ಗುರುತಿಸುವದರಿಂದ ಬಹುಶ: ಈ ಅರಮನೆಯು ವಿಜಯನಗರ ಕಾಲಕ್ಕಿಂತ ಮುಂಚೆಯೇ ನಿರ್ಮಾಣಗೊಂಡಿರಬಹುದಾಗಿದೆ. ಇದು ನಾಲ್ಕು ಮೂಲೆಗಳನ್ನು ಹೊಂದಿದ್ದು, ಹೊರಮುಖವಾಗಿ ಒಂದು ಮೂಲೆಯಿಂದ ಇನ್ನೊಂದು ಮೂಲೆಗೆ ಸು. 100 ಅಡಿ ಅಂತರವಿದೆ.

ನಾಲ್ಕು ಮೂಲೆಗಳಿಗೂ ಚೌಕಕಾರದ ಬುರುಜುಗಳಿವೆ. ಇವು ಸು. 50 ಅಡಿ ಎತ್ತರವಾಗಿರುವಂತೆ [illegible]ಾಗುತ್ತದೆ. ಈ ಬುರುಜುಗಳು ಮೂರು ಹಂತಗಳನ್ನು ಒಳಗೊಂಡಿವೆ. ಇವು ಕೆಳಗಿನಿಂದ ಮೊದಲ ಹಂತದಲ್ಲಿ ಬುರುಜಿಗಿಂತ ಸ್ವಲ್ಪ ಅಗಲವಾದ ಕಟ್ಟೆಯನ್ನು ಹೊಂದಿವೆ. ಎರಡನೇ ಹಂತದಲ್ಲಿ ಅರಮನೆಯ ಚಾವಣಿಯವರೆಗೂ ಕಟ್ಟಲ್ಪಟ್ಟಿದ್ದು ಮೂರನೇ ಹಂತ ಇವು [illegible] ಪ್ರಮುಖವಾದುದು. ಇವು ಅರಮನೆಯ ಚಾವಣಿಯಮೇಲ್ಭಾಗದಲ್ಲಿ ಕಂಡುಬರುತ್ತವೆ. ಇವುಗಳ ಮೂರೂ ಮೂಲೆಗೆ ಅಗಲವಾದ ಕಿಂಡಿಗಳಿವೆ. ಇನ್ನೊಂದು ಮೂಲೆಯೂ ಅರಮನೆಯ ಒಳಮುಖದಲ್ಲಿದೆ. ಅಲ್ಲಿಂದಲೇ ಈ ಬುರುಜುಗಳ ಮೇಲ್ಭಾಗಕ್ಕೆ ಹೋಗುವ ವ್ಯವಸ್ಥೆ ಇದ್ದಿರುವಂತೆ ಗೋಚರಿಸುತ್ತದೆ. ಈ ಅರಮನೆಯ ಕಟ್ಟಡಕ್ಕೆ ಕಲ್ಲು ಮತ್ತು ಗಾರೆಯನ್ನು

ಬಳಸಿ ಕಟ್ಟಿದಂತೆ ತೋರುತ್ತದೆ. ಈ ಬುರುಜು ಮತ್ತು ಅರಮನೆಯ ಮುಂಭಾಗದ ಚಾವಣಿಯ ಮೇಲಿನ ಕಟ್ಟಡದಲ್ಲಿ ಉಬ್ಬು ಚಿತ್ರಗಳನ್ನು ನಿರ್ಮಿಸಿರುವುದನ್ನು ಕಾಣಬಹುದಾಗಿದೆ. ಅರಮನೆಯ ಚಾವಣಿ ಮಾತ್ರ ಬಿದ್ದುಹೋಗಿದ್ದು. ಬಲಭಾಗದ ಬುರುಜುಗಳು ಮತ್ತು ಸುತ್ತಲೂ ಬೃಹದಾಕಾರದ ಗೋಡೆಗಳು ಉಳಿದುಕೊಂಡಿವೆ.

ಈ ಕಟ್ಟಡದ ಲಕ್ಷಣಗಳನ್ನು ಹಾಗೂ ರಕ್ಷಣೆಗಾಗಿ ಮಾಡಿಕೊಂಡ ಬುರುಜುಗಳ ವ್ಯವಸ್ಥೆ ಈ ಎಲ್ಲಾ ಅಂಶಗಳನ್ನು ಗಮನಿಸಿದರೆ ಇದರ ಮುಖ್ಯವಾದ ಅರಮನೆಯೇ ಆಗಿರಬಹುದಾಗಿದೆ. ಈ ರಾಜನ ಅರಮನೆಯ ಹಿಂಭಾಗಕ್ಕೆ ಸು. 100 ಮೀ. ಅಂತರದಲ್ಲಿ ಇನ್ನೊಂದು ಅರಮನೆಯಿದೆ. ಅದಕ್ಕೆ ರಾಣಿಯ ಅರಮನೆಯೆಂದು ಸ್ಥಳೀಯರು ಅಭಿಪ್ರಾಯಪಡುತ್ತಾರೆ. ಈ ಅರಮನೆಯೂ ರಾಜನ ಅರಮನೆಯಂತೆಯೇ ನಾಲ್ಕು ಮೂಲೆಗಳನ್ನು ಹಾಗೂ ನಾಲ್ಕು ಬುರುಜುಗಳನ್ನು ಹೊಂದಿದೆ. ಆದರೆ ಬುರುಜುಗಳು ಚೌಕಕಾರವಾಗಿರದೆ ದುಂಡಾಗಿರುವಂತೆ ಗೋಚರಿಸುತ್ತವೆ. ರಾಜನ ಅರಮನೆಯ ಕಟ್ಟಡದ ಅವಶೇಷದಷ್ಟು, ಈ ಅರಮನೆಯ ಕಟ್ಟಡದ ಅವಶೇಷ ಉಳಿದಿಲ್ಲ. ಇದುಕೂಡ ಉತ್ತರಕ್ಕೆ ಮುಖ ಮಾಡಿದೆ. ನಾಲ್ಕೂ ಗೋಡೆಗಳು ಉಳಿದುಕೊಂಡಿವೆ. ಈ ಅರಮನೆಯ ಹಿಂಭಾಗದ ಗೋಡೆಯಲ್ಲಿ ಗೂಳಿಯ ರೇಖಾ ಚಿತ್ರ ಚಿತ್ರಿಸಲಾಗಿದೆ. ಈ ಎರಡೂ ಅರಮನೆಗಳು ವಿಭಿನ್ನ ಕಾಲದಲ್ಲಿ ಕಟ್ಟಿರಬಹುದಾದ ಸಾಧ್ಯತೆಗಳಿವೆ. ರಾಜನ ಅರಮನೆಗಿಂತ ರಾಣಿಯ ಅರಮನೆಯೆಂದು ಕರೆಯಲ್ಪಡುವ ಈ ಕಟ್ಟಡ ಮೊದಲಿ ನಿರ್ಮಾಣಗೊಂಡಿರಬಹುದಾಗಿದೆ.

ಮೂರ್ತಿಶಿಲ್ಪ :

ಶಿಲ್ಪಿಗೆ ಸ್ಪೂರ್ತಿ ಉಕ್ಕಿ ಬಂದಂತೆ ಕೆತ್ತುವ ಸ್ವಾತಂತ್ರ್ಯ ಅವರಿಸುತ್ತದೆ. ಶಿಲ್ಪಸಿರಿ ನಮ್ಮಲ್ಲಿ ಮೂಡಿದ್ದು ಈ ರೀತಿಯಲ್ಲಿ ಎನ್ನಬಹುದು. ಇಲ್ಲಿಂದ ಮೂರ್ತಿ ಪೂಜೆಗೆ ವೇದಿಕೆಯೊಂದು ದೊರೆತಂತಾಗಿರಬಹುದಾಗಿದೆ. ಬೇರೆ ಬೇರೆ ಮೂರ್ತಿಗಳನ್ನು ಮಣ್ಣಲ್ಲಿ ಮಾಡಿದರು. ಕೈ ಪಳಗಿದಂತೆಲ್ಲ ಸುಧಾರಣೆ ಮಾಡಿಕೊಳ್ಳು ಭಯ ಭೀತಿ ಬೀಳಿಸುವ ಉಗ್ರ ಮೂರ್ತಿಗಳನ್ನು ಕಲ್ಲು, ಲೋಹಗಳಿಂದಲೂ ಸೃಷ್ಟಿಸಿದ್ದುದು ತೋರುತ್ತದೆ. ಗುಡಿಗೆ ಆದರಲ್ಲಿನ ದೇವತೆಯ ಮೂರ್ತಿಯ ಹೆಸರನ್ನು ಇಡುವುದು ಗಮನಿಸಿದ್ದೇವೆ. ಉದಾಹರಣೆಗಾಗಿ, ಹಂಪೆಯ ವಿರೂಪಾಕ್ಷ ದೇವಾಲಯ, ಉಚ್ಚಂಗೆಮ್ಮನ ದೇವಾಲಯ ಇತ್ಯಾದಿಗಳು. ಮಧ್ಯಕಾಲಕ್ಕಿಂತ ಮುಂಚಿನ ದಿನಗಳಲ್ಲಿ ಪುರುಷ ದೇವತೆಗಳಿಗಿಂತ ಸ್ತ್ರೀ ದೇವತೆ ಮೂರ್ತಿಗಳೇ ಹೆಚ್ಚು ಹುಟ್ಟಿದ್ದು ಕಾಣಬಹುದಾದದೆ. ಮೂರ್ತಿಗಳ ವಿವರದ ಜೊತೆ,ಗೋಡೆ ನವರಂಗ ಹಾಗೂ ಮಂಟಪಗಳ ಕೆತ್ತನೆ ಬಗ್ಗೆ ಶಿಲ್ಪಶಾಸ್ತ್ರದಲ್ಲಿ ವಿವರಿಸಿದ್ದಾರೆ.

ಭಂಗಿ, ಮುದ್ರೆ ಮತ್ತು ಆಯುಧಗಳು ಮೂರ್ತಿ ಶಿಲ್ಪದ ಪ್ರಮುಖ ವಿಷಯಗಳು, ಶಿಲ್ಪಶಾಸ್ತ್ರದಲ್ಲಿ ನಿಂತಿರುವ ಹಾಗೂ ಕುಳಿತಿರುವ ಮತ್ತು ಮಲಗಿರುವ (ಶಯನ) ಎಂಬ ಭೇದಗಳಿವೆ. ವಾಹನವನ್ನೇರಿರುವ ಶಿಲ್ಪಕ್ಕೆ ಯಾನಕ ಎಂದಿದ್ದಾರೆ. ಪ್ರಸ್ತುತ ಅಧ್ಯಾಯದ ಈ ಭಾಗದ ಉಚ್ಚಂಗಿ ದುರ್ಗದಲ್ಲಿರುವ ಪ್ರಮುಖ ಮೂರ್ತಿ ಶಿಲ್ಪಗಳನ್ನು ಕುರಿತು ಚರ್ಚಿಸಲು ಪ್ರಯತ್ನಿಸಲಾಗಿದೆ.

ಹಾಲಮ್ಮನ ದೇವಾಲಯದ ಗರ್ಭಗೃಹದಲ್ಲಿರುವ ಮೂರು ಸ್ತ್ರೀ ದೇವತಾ ಶಿಲ್ಪಗಳು ಒಂದೇ ತರ[illegible] ಲಕ್ಷಣಗಳನ್ನು ಹೊಂದಿರುವುದು ತೋರುತ್ತದೆ. ಈ ಮೂರು ಶಿಲ್ಪಗಳು ಆಸೀನವಾಗಿವೆ. ಈ ಶಿಲ್ಪಗಳ ಎಡಭಾಗದ ಕೈಗಳಲ್ಲಿ ಹಣ್ಣು ಹಾಗೂ ಬಲಭಾಗದ ಕೈಗಳಲ್ಲಿ ಪದ್ಮಗಳಿವೆ. ಇವು ಜಟಾ ಮುಕುಟ, ಕರ್ಣ, ಕಂಠಾಭಾರಣ, ವಾಜಿಬಂಧ (ಸೊಂಟಪಟ್ಟಿ) ಕೈಗಡಗ, ಕಾಲುಗಡಗವನ್ನು ಹೊಂದಿವೆ. ಈ ವಿಗ್ರಹಗಳ ಸುತ್ತಲೂ ಹಿಂಬಾಗದಲ್ಲಿ ಕಾಮಾನಿನಾಕಾರದ ಶಿಲೆಯನ್ನು ಕೆತ್ತಲಾಗಿದೆ. ಈ ಮೂರು ವಿಗ್ರಹಗಳು ಸುಮಾರು ಎರಡು ಅಡಿ ಎತ್ತರವಿದ್ದು ಪೂರ್ವದಿಕ್ಕಿನ ಕಡೆ ಮುಖ ಮಾಡಿವೆ. ಈ ವಿಗ್ರಹಗಳನ್ನೊಳಗೊಂಡ ಹಾಲಮ್ಮನ ದೇವಾಲಯವು ಮುಂಭಾಗದಲ್ಲಿ ಒಂದು ಶಾಸನ ವನ್ನು ಹೊಂದಿದೆ. ಈ ಶಾಸನದಲ್ಲಿ ಉಚ್ಚಂಗಿ ದೇವಿಗೆ ದಾನಬಿಟ್ಟ ಉಲ್ಲೇಖ ಬರುತ್ತದೆ.

ಈ ದೇವಾಲಯದ ಒಳಬಲಬದಿಯಲ್ಲಿ ಯೂನಕ ಶಿಲ್ಪವಿದೆ. ಇದು ಸುಮಾರು 2 ಅಡಿ ಎತ್ತರವಿದ್ದು ಶಿಲ್ಪದ ಮೇಲ್ಭಾಗ ಶಿಥಿಲಗೊಂಡಿದೆ. ಕುದುರೆ, ಅದರ ಮೇಲೆ ಜೋಡಿ ಶಿಲ್ಪ ಕೆತ್ತಲಾಗಿದ್ದು, ಇವುಗಳ ಕೈಯಲ್ಲಿ ಕತ್ತಿಯನ್ನು ಹಿಡಿದಿರುವ ದೃಶ್ಯ ಹಾಗೂ ಕುದುರೆಯ ಮುಂಗಾಲುಗಳು ಮೇಲೆದ್ದಿವೆ. ಸ್ಥಳೀಯರು ಇದನ್ನು ಮೈಲಾರ ದೇವರೆಂದು ಅಭಿಪ್ರಾಯ ಪಡುತ್ತಾರೆ. ಈ ದೇವಾಲಯದಲ್ಲಿ ಉದ್ದದ ಕಲ್ಲಿನ ಹಲಗೆಯಲ್ಲಿ ಸಪ್ತ ಮಾತೃಕೆಯರನ್ನು ಕೆತ್ತಲಾಗಿದ್ದು ಇದು ಸು. ಒಂದು ಅಡಿ ಎತ್ತರವಾಗಿದೆ. ಬನಶಂಕರಿಯ ದೇವಾಲಯದಲ್ಲಿರುವ ಶಿಲ್ಪವು ಪಾಣಿಪೀಠದಲ್ಲಿ ಸೇರಿಸಲ್ಪಟ್ಟಿದೆ. ಹೀಗೆ ಅಳವಡಿಸಲ್ಪಟ್ಟ ಶಿಲ್ಪವು ಎರಡು ತುಂಡಾಗಿದ್ದು, ಮೇಲ್ಭಾಗ ನ್ನು ಪಾಣಿಪೀಠಕ್ಕೆ ಒರಗಿಸಲಾಗಿದೆ. ಈ ಶಿಲ್ಪದ ತಳಭಾಗ ಪಾಣಿ ಪೀಠದಲ್ಲಿಯೇ ಇದೆ. ಪಾಣಿಪೀಠಕ್ಕೆ ಒರಗಿಸಿದ ಶಿಲ್ಪದ ಬಲಭಾಗ ಕೈಗಳಲ್ಲಿ ಡಮರು ಮತ್ತು ಬಾಣವಿದ್ದು, ಎಡಭಾಗದ ಕೈಗಳಲ್ಲಿ ಬಿಲ್ಲು ಮತ್ತು ತ್ರಿಶೂಲ ಇರಬಹುದಾದುದು ಅಸ್ಪಷ್ಟವಾಗಿ ಕಾಣುತ್ತದೆ. ಇದು ಮೂಲತಃ ಶಿವ ದೇವಾಲಯವಾಗಿರಲೂಬಹುದಾಗಿದೆ.

ತವಕ್ಲೇಶ್ವ ದೇವಾಲಯದ ಅಂತರಾಳದ ಮುಂಬಾಗಿಲ ಪಾರ್ಶ್ವಗಳಲ್ಲಿ ಎರಡು ದ್ವಾರಪಾಲಕರ ವಿಗ್ರಹಗಳನ್ನು ಕೆತ್ತಲಾದಿವೆ. ಇವು ಸು. 6ಅಡಿ ಎತ್ತರವಾಗಿದ್ದು ಶಿಥಿಲ ಗೊಂಡಿವೆ. ಇವುಗಳನ್ನು ಆಭರಣಗಳಿಂದ ಅಲಂಕರಿಸಲಾಗಿದೆ. ಇವುಗಳ ಕೈಗಳಲ್ಲಿ ಸರ್ಪ ಖಟ್ವಾಂಗಗಳಿದ್ದು ಜಟಾಮುಕುಟಧಾರಿಯಾಗಿವೆ.

ಕೆಳಕೋಟೆ ಆಂಜನೇಯ ದೇವಾಲಯದಲ್ಲಿರುವ ಶಿಲ್ಪವು ಆಂಜನೇಯ ಶಿಲ್ಪವಾಗಿದ್ದು ಸು. 8 ಅಡಿ ಎತ್ತ[illegible]ದೆ. ಇದು ಇತ್ತೀಚಿನದಾಗಿರಬಹುದಾದುದು ಗೋಚರಿಸುತ್ತದೆ. ವೀರಭದ್ರ ದೇವಾಲ[illegible]ರುವ ವಿಗ್ರಹವನ್ನು ಹೊಯ್ಸಳರ ಕಾಲದ್ದೆಂದು ತಿಳಿದು ಬರುವ ಶಾಸನದ ಶಿಲೆಯಲ್ಲಿ ಕೆತ್ತಲಾಗಿದೆ. ಇದು ಸು. 4 ಅಡಿ ಎತ್ತರವಾಗಿದ್ದು ಇದು ಬಲ ಭಾಗದ ಕೈಗಳಲ್ಲಿ ಖಡ್ಗ ಬಾಣ ಹಾಗೂ ಎಡ ಭಾಗದ ಕೈಗಳಲ್ಲಿ ಬಿಲ್ಲು ಮತ್ತು ಗುರಾಣಿಗಳನ್ನು ಹೊಂದಿದೆ. ತಲೆಯ ಮೇಲೆ ಕಿರೀಟವನ್ನು ಹೊಂದಿದ್ದು ಸುತ್ತಲೂ ಕಮಾನಿನಾಕಾರದ ಶಿಲೆಯನ್ನು ಕೆತ್ತಲಾಗಿದ್ದು ಅದರ ಬಲಬದಿಯಲ್ಲಿ ದಕ್ಷಿಣದ ಕಡೆ ಬ್ರಹ್ಮನ ಶಿಲ್ಪವನ್ನು ಕೆತ್ತಲಾಗಿದೆ. ಈ ಮೂರ್ತಿಯು ಬಹುಶಃ ವಿಜಯನಗರದ ನಂತರದ ಕಾಲದ್ದಾಗಿದೆ. ಈ ವೀರಭದ್ರ ದೇವಾಲಯದ ಹೊರ ಭಾಗದಲ್ಲಿ ದೇವಸ್ಥಾನಕ್ಕೆ ಒಣಗಿ ಕೊಂಡಿರುವ ಸಪ್ತ ಮಾತೃಕೆಯರ ಶಿಲ್ಪವಿದೆ. ಇದನ್ನು ಉದ್ದವಾದ ಹಲಗೆಯಲ್ಲಿ

ಕೆತ್ತಲಾಗಿದ್ದು, ವೀಣಾ, ಬ್ರಾಹ್ಮಿ, ಮಹೇಶ್ವರಿ, ಕೌಮಾರಿ, ವೈಷ್ಣವಿ ವರಾಹಿ, ಇಂದ್ರಾಣಿ ಚಾಮುಂಡಿ, ಗಣಪತಿಯನ್ನೊಳಗೊಂಡಿದೆ. ಚಿಕ್ಕಹೊಂಡದ ಉತ್ತರದಕಡೆಯಿರುವ ಜೈನ ದೇವಾಲಯದಲ್ಲಿರುವ ಶಿಲ್ಪವು ತೀರ್ಥಂಕರವದಾಗಿದೆ. ಪದ್ಮಾಸನದಲ್ಲಿ ಕುಳಿತಂತಿದ್ದು ಎಡಡು ತುಂಡಾಗಿದೆ. ಪದ್ಮಾಸನದಲ್ಲಿದ್ದು ಆ ತುಂಡಾದ ಒಂದು ಭಾಗವನ್ನು ಆದರ ಮುಂದೆಯೆ ಒರಗಿಸಲಾಗಿದೆ. ಈ ಶಿಲ್ಪದ ಕೆಳಗೆ ಪೀಠವಿದ್ದು ನೆಲಮಟ್ಟದಿಂದ ಸು. 3 ಅಡಿ ಎತ್ತರವಾಗಿದೆ. ಈ ಶಿಲ್ಪವು ಸು. 11 ಅಥವಾ 12 ನೆಯ ಶತಮಾನಕ್ಕಿಂತಿಲೂ ಮುಂಚಿನದಿರಬಹುದಾದುದು ಗೋಚರಿಸುತ್ತದೆ.

ಉಚ್ಚಂಗೆಮ್ಮ ದೇವಾಲಯದಲ್ಲಿರುವ ಕಾಳಮ್ಮನ ಶಿಲ್ಪ, ಇದು ಸು. 4 ಅಡಿ ಎತ್ತರವಾಗಿದ್ದು, ಪೀಠವನ್ನು ಹೊಂದಿದೆ. 4 ಕೈಗಳಲ್ಲಿ ತ್ರಿಶೂಲ, ಬಟ್ಟಲು, ಡಮರುವನ್ನು ಹೊಂದಿದ್ದು ಕಿರೀಟವನ್ನು ಕೆತ್ತಲಾಗಿದೆ. ಸೊಂಟಪಟ್ಟಿ ಕಾಲುಗಡಗ, ಕಂಠಾಭರಣಗಳನ್ನು ಕೆತ್ತಿದಂತೆ ಗೋಚರಿಸುತ್ತದೆ. ಶಿಲ್ಪಪೂರ್ಣ ಬಟ್ಟೆಯಿಂದ ಮುಚ್ಚಲ್ಪಟ್ಟಿರುವದರಿಂದ ಅಪೂರ್ಣವಾಗಿ ಗೋಚರಿಸುತ್ತದೆ. ಉತ್ಸವಾಂಭ ಶಿಲ್ಪವು ಲೋಹದಿಂದ ಮಾಡಲ್ಪಟ್ಟಿರುತ್ತದೆ. ಇದು ಮುಕ್ಕಾಲು ಅಡಿ ಎತ್ತರವಿದ್ದು ಕೈಗಳಲ್ಲಿ ಡಮರು, ತ್ರಿಶೂಲ, ಬಟ್ಟಲು, ಖಡ್ಗವನ್ನು ಹೊಂದಿದೆ. ಕಿರೀಟವನ್ನು ಹೊಂದಿರುವ ಇದು ಹಲಗೆ ಗದ್ದುಗೆಯ ಮೇಲಿರುವುದು ಕಂಡುಬರುತ್ತದೆ. ಇಲ್ಲಿಯೆ ಎರಡು ಹಳೆಯದಾದ ಕಂಚಿನ ಶಿಲ್ಪಗಳಿವೆ.

## ಇತರ ಶಿಲ್ಪಾವಶೇಷಗಳು:

ಉಚ್ಚಂಗೆಮ್ಮ ದೇವಾಲಯದ ಪೂರ್ವ ಭಾಗದಲ್ಲಿ ಮೂರು ಶಿಲ್ಪಗಳು ಇವು. ಅವು ಪ್ರಾಚೀನ ಶಿಲ್ಪಗತರೆ ಗೋಚರಿಸುತ್ತವೆ. ಉಚ್ಚಂಗಿ ದೇವಿಯ ಆವರಣದ ಆಗ್ನೇಯಕ್ಕೆ ಮಾರೆಮ್ಮ, ಮಾತಂಗಮ್ಮ ಕಣ ಕೋಷ್ಠಮ್ಮ ಎಂದು ಕರೆಯಲ್ಪಡುವ ಹಳೆಯ ಶಿಲ್ಪಗಳಿವೆ. ಉಚ್ಚಂಗೆಮ್ಮ ದೇವಾಲಯದ ಗರ್ಭಗುಡಿಗೆ ಅಂಟಿಕೊಂಡಿರುವ ದಕ್ಷಿಣಭಾಗದಲ್ಲಿ ಸ್ತ್ರೀ ಮತ್ತು ಪುರುಷ ವಿಗ್ರಹ ಕೆತ್ತಲಾಗಿದೆ. ಹಾಗೂ ದೇವಾಲಯದ ಸುತ್ತಲೂ ನಾಗರಕಲ್ಲುಗಳು ಕಂಡುಬರುತ್ತವೆ. ಅರಮನೆಯ ಮುಂಭಾಗದಲ್ಲಿ ಪ್ರಾಚೀನ ಶಿಲ್ಪವೊಂದು ಕಟ್ಟೆಯಲ್ಲಿ ಸೇರಿಕೊಂಡಿದೆ ಅದರ ಕಿರೀಟದ ಹಿಂಬದಿಯಲ್ಲಿ ಪ್ರಾಚೀನವಾದ ಪ್ರಭಾವಳಿಯನ್ನು ಕೆತ್ತಲಾಗಿದ್ದು ಮುಂಭಾಗದ ಮೂರ್ತಿಯು ಭಗ್ನವಾಗಿರುವುದು

ಕಂಡುಬರುತ್ತದೆ. ಕೋಟೆಯ ಮೇಲ್ಭಾಗದಲ್ಲಿರುವ ರಾಜನ ಅರಮನೆಯ ಮೇಲ್ಭಾಗದ ತೆನೆಗಳಲ್ಲಿ ಸುಬ್ಬ ಶಿಲ್ಪಗಳನ್ನು ಚಿತ್ರಿಸಲಾಗಿದೆ. ಈ ಅರಮನೆಯ ಪೂರ್ವ ಗೋಡೆಗೆ ನಾಗರ ಕಲ್ಲುಗಳನ್ನು ಒರಗಿಸಲಾಗಿದ್ದು, ಕೆಲವು ನಾಗರ ಕಲ್ಲುಗಳು ತುಂಬಾ ಎತ್ತರ ವಾಗಿದ್ದು ಏಳು ಎಡೆಗಳನ್ನು ಹೊಂದಿದೆ. ರಾಣಿಯ ಅರಮನೆಯ ಹಿಂಭಾಗದ ಗೋಡೆ ಯಲ್ಲಿ ಬಸವಣ್ಣನ ನಿಂತ ಆಕಾರವನ್ನು ಚಿತ್ರಿಸಲಾಗಿದೆ. ಕೋಟೆಯಲ್ಲಿರುವ ಊರಿನ ವರುಣ ದಿಕ್ಕಿಗೆ ಆಂಜನೆಯ ಗುಡಿಯಲ್ಲಿ ಕೈ ಮುಗಿದು ನಿಂತಿರುವ ಸಂಜೀವಾ ಆಂಜನೆಯ ಶಿಲ್ಪವಿದೆ. ಉಚ್ಚಂಗಿ ದುರ್ಗದಲ್ಲಿ ಜೋಡಿದುರುಗಮ್ಮ ವಿಗ್ರಹಗಳು ಹಳೆಯ ವಿಗ್ರಹ ಗಳಂತೆ ಕಾಣುತ್ತವೆ. ವಿಭಿನ್ನವಾದ ಶಿವಲಿಂಗಗಳು ಉಚ್ಚಂಗಿದುರ್ಗದ ತವಕ್ಲೇಶ್ವರ ದೇವ ಸ್ಥಾನದಲ್ಲಿ, ಈ ದೇವಾಲಯದ ನೈರುತ್ಯ ದಿಕ್ಕಿನ ಹೊಲದಲ್ಲಿ, ನೊಣ್ಣೀಶ್ವರ ದೇವಾಲಯ ದಲ್ಲಿ ಚಿಕ್ಕಹೊಂಡದ ಮೇಲ್ಭಾಗದಲ್ಲಿರುವ ಶಿವ ದೇವಾಲಯದಲ್ಲಿ ರಾಮೇಶ್ವರ ದೇವಾ ಲಯದಲ್ಲಿ ಮತ್ತು ಇದರ ಮುಂಭಾಗದ ಬಯಲು ಪ್ರದೇಶಗಳಲ್ಲಿ ಹಾಗೂ ರಾಜನ ಅರಮನೆಯ ಮಧ್ಯ ಭಾಗದಲ್ಲಿ ಕಂಡುಬರುತ್ತವೆ. ಉಚ್ಚಂಗಿದುರ್ಗದ ಕೋಟೆಯ ಅಮ್ಮನ ಕಟ್ಟೆಯ ಹಿಂಭಾಗದ ನೆಲದಲ್ಲಿ ಬಿದ್ದ ಕಂಬವು 4 ಹಂತಗಳನ್ನು ಹೊಂದಿದ್ದು ಮೊದಲ ಕೆಳಭಾಗವು ಚೌಕಾಕಾರವಾದ ಸಾದಾ ಭಾಗವಾಗಿದೆ. 2ನೆಯ ಹಂತವು ದುಂಡಾಗಿದ್ದು ಪಟ್ಟಿಕೆಯನ್ನು ಕೆತ್ತಲಾದದೆ. 3ನೆಯ ಹಂತವು ಚೌಕಾಕಾರವಾಗಿದ್ದು ಲತಾ ಬಳ್ಳಿ ಗಳಿಂದ ಆವರಿಸಲ್ಪಟ್ಟ ಅಲಂಕೃತವಾದ ಕಲಶಗಳನ್ನು ನಾಲ್ಕು ಭಾಗದಲ್ಲಿ ಕೆತ್ತಲಾಗಿದೆ. ಕಂಬದ ನಾಲ್ಕನೆಯ ಭಾಗವು ದುಂಡನೆಯ ಪಟ್ಟಿಕೆಯನ್ನು ಹೊಂದಿದೆ. ಇದು 9ನೇ ಶತಮಾನದ ಮೊದಲೇ ನಿರ್ಮಾಣಗೊಂಡಿರಬಹುದಾಗಿದೆ.

ಹೀಗೆ ಉಚ್ಚಂಗಿದುರ್ಗ ... ಲ್ಲಿ ಮೂರ್ತಿಗಳ ಅಧ್ಯಯನದಿಂದ ಈ ಪ್ರದೇಶದ ಪ್ರಾಚೀನತೆಯನ್ನು ಗ್ರಹಿ ... ದು. ಮತ್ತು ಉಚ್ಚಂಗಿ ದುರ್ಗದ ಮಹತ್ವವನ್ನು ಅರಿಯಬಹುದು.

ವೀರಗಲ್ಲುಗಳು:

ಯುದ್ಧದಲ್ಲಿಯಾಗಲಿ, ಪ್ರಾಣಿ ಹಿಂಸೆಯಿಂದ ಜನರನ್ನು ರಕ್ಷಿಸುವಲ್ಲಿ ಯಾಗಲಿ, ರಾಜ್ಯ ಮತ್ತು ಜನತೆಯ ರಕ್ಷಣೆಗೆ ಸಂಬಂಧಿಸಿದ ಯಾವುದೇ ಹೋರಾಟದಲ್ಲಿ ಮಡಿದರೆ ಅಂತಹವರ ಹೆಸರಿನಲ್ಲಿ ಸ್ಮಾರಕ ಶಿಲೆಗಳ ದೃಶ್ಯಾವಳಿಗಳನ್ನು ಕೆತ್ತಿಸಿ ನೆಡುವ ಪದ್ಧತಿ ಬಹುದಿನಗಳ ಹಿಂದಿನಿಂದಲೂ ಇದ್ದಿರಬಹುದಾದ ಕಂಡುಬರುತ್ತದೆ.

ವೀರರ ಆರಾಧನಾ ಸಂಪ್ರದಾಯದ ಹಿಂದೆ, ಅವನ ಆದರ್ಶಗಳು ತಮ್ಮ ಪರಂಪರೆಯಲ್ಲಿ ಉಳಿದುಕೊಂಡು ಬರಬೇಕು ಎಂಬ ಒಂದು ವಿಶೇಷ ಕಾಳಜಿ ಇರಬೇಕು.[18] ಉಚ್ಚಂಗಿದುರ್ಗದ ಬನಶಂಕರಿ ದೇವಾಲಯದ ಮುಂದಿನ ಗೋಡೆಯ ಒಳಮುಖದಲ್ಲಿರುವ ವೀರಗಲ್ಲು ಮೂರು ಹಂತಗಳನ್ನು ಹೊಂದಿದ್ದು ಮೊದಲ ಹಂತದಲ್ಲಿ ವೀರನು ಬಲ ಗೈಯಲ್ಲಿ ಕತ್ತಿಯನ್ನು ಹಿಡಿದಿದ್ದು ಎಡಗೈಯಲ್ಲಿ ಗುರಾಣಿಯನ್ನು ಹಿಡಿದು ಹೋರಾಡುವ ದೃಶ್ಯವಿದ್ದು, ಈ ವೀರನು ಎದುರು ಭಾಗದಲ್ಲಿ ಶತ್ರುಗಳು ಕತ್ತಿ ಗುರಾಣಿ ಹಿಡಿದ ದೃಶ್ಯವಿದೆ. ವೀರನು ಒಬ್ಬನನ್ನು ನೆಲಕ್ಕೆ ಕೆಡುಹಿ ಆತನ ಮೇಲೆ ಕಾಲಟ್ಟು ಹೋರಾಡುತ್ತಿರುವಂತೆ ಚಿತ್ರವನ್ನು ಕೆತ್ತಲಾಗಿದೆ. ವೀರನ ಹಿಂಭಾಗದಲ್ಲಿ ಒಬ್ಬ ವ್ಯಕ್ತಿಯು ಚಾಮರವನ್ನು ಹಿಡಿದಂತೆ ಕೆತ್ತಲಾಗಿದೆ.

ಎರಡನೆಯ ಹಂತದಲ್ಲಿ ವೀರನು ಪಲ್ಲಕ್ಕಿಯಲ್ಲಿ ಕುಳಿತಿದ್ದಾನೆ. ಇಬ್ಬರು ಸುರಾಂಗನೆಯರು ಒಂದು ಕೈಯಲ್ಲಿ ಪಲ್ಲಕ್ಕಿ ಇನ್ನೊಂದಡೆ ಚಾಮರವನ್ನು ಹಿಡಿದಿರುವ ದೃಶ್ಯ ಕೆತ್ತಿದ್ದಾರೆ. ಮೂರನೆಯ ಹಂತದಲ್ಲಿ ಶಿವ, ಅರ್ಚಕ, ನಂದಿಯ ಚಿತ್ರಗಳನ್ನು ಕೆತ್ತಲಾಗಿದೆ. ಈ ವೀರಗಲ್ಲಿನ ಗಲಭಾಗ ಶಿಥಿಲವಾಗಿದೆ. ಇದನ್ನು ಬಳಪದ ಕಲ್ಲಿನಲ್ಲಿ ಕೆತ್ತಿದ್ದು ಸು. 4 ಅಡಿ ಎತ್ತರವಾಗಿದೆ. ಉಚ್ಚಂಗಿ ದುರ್ಗದ ಚಿಕ್ಕ ಹೊಂಡದ ಪೂರ್ವ ದಿಕ್ಕಿನಲ್ಲಿರುವ ನೊಣಬೇಶ್ವರ ದೇವಸ್ಥಾನ ಮುಂದೊಂದು ವೀರಗಲ್ಲಿದೆ. ಇದು 3 ಹಂತಗಳನ್ನು ಹೊಂದಿರಬಹುದಾಗಿದೆ. ಮೊದಲ ಹಂತವು ಪೂರ್ಣ ನಾಶವಾಗಿದೆ. ಎರಡನೇ ಹಂತದಲ್ಲಿ ವೀರನು ಪಲ್ಲಕ್ಕಿಯಲ್ಲಿ ಕುಳಿತಿದ್ದಾನೆ ಇಬ್ಬರು ಸುರಾಂಗನೆಯರು ಒಂದು ಕೈಯಲ್ಲಿ ಪಲ್ಲಕ್ಕಿ ಇನ್ನೊಂದು ಕೈಯಲ್ಲಿ ಚಾಮರವನ್ನು ಹಿಡಿದಿರುವ ದೃಶ್ಯ ಕೆತ್ತಿದ್ದಾರೆ. ಬಲಗಡೆಯ ಪೂರ್ಣ ಭಾಗವು ಶಿಥಿಲಗೊಂಡಿದೆ. ಮೂರನೆಯ ಹಂತದಲ್ಲಿ ಶಿವ ಅರ್ಚಕ, ಸೂರ್ಯ ಚಂದ್ರ ಮತ್ತು ವೀರನ ಚಿತ್ರಗಳನ್ನು ಕೆತ್ತಲಾಗಿದೆ. [illegible] ಭಾಗ ಶಿಥಿಲಗೊಂಡಿರುವುದರಿಂದ ಬಹುಶ: ನಂದಿ ವಿಗ್ರಹ [illegible]ಲ್ಲಿ ಕೆತ್ತಲ್ಪಟ್ಟಿರಬಹುದು. ಈ [illegible]ಲ್ಲು ನಾಲ್ಕು [illegible] ಎತ್ತರ ಮತ್ತು ಸು. [illegible] ಅಡಿ ಅಗಲವಾಗಿದೆ. ಇದರ ಎರಡು ಪಟ್ಟ[illegible]ಲ್ಲಿ ಶಾಸನವನ್ನು ಕೆತ್ತಲಾಗಿದೆ. ಇದರಲ್ಲಿ ಕ್ರಿ.ಶ. 1285ರ ಕಾಲ ಮತ್ತು

ಬೇಡರು ಆಕ್ರಮಿಸಿದ ಸಂಗಮ ದೇವರ ಹಾಗೂ ಬೊಂಕಿ ನೀವರ ಉಲ್ಲೇಖ ಬರುತ್ತದೆ.

ವೀರಮಾಸ್ತಿಕಲ್ಲು :

ಪ್ರಾಚೀನ ಕರ್ನಾಟಕದಲ್ಲಿ ವ್ಯಕ್ತಿಗಳು ತಮ್ಮ ಪ್ರಾಣವನ್ನು ತಾವೇ ತೆಗೆದು ಕೊಳ್ಳುವ ಕೆಲವು ಪದ್ಧತಿಗಳಿದ್ದುವು. ಇವುಗಳನ್ನು ಆತ್ಮಬಲಿ ಎಂದು ಕರೆದಿದ್ದಾರೆ.[19] ಈ ಆತ್ಮಬಲಿಗಳಲ್ಲಿ ಕೆಲವು ಪೂರ್ವ ಧಾರ್ಮಿಕವಾದವು. ಇನ್ನು ಕೆಲವು ಉದಾತ್ತವಾದ ಪತಿ ಪ್ರೇಮವನ್ನು, ಸ್ವಾಮಿಭಕ್ತಿಯನ್ನು ಎತ್ತಿ ತೋರಿಸತಕ್ಕವು. ಆ ಉಚ್ಚಂಗಿ ದುರ್ಗದ ವೀರಭದ್ರ ದೇವಾಲಯದ ಹಿಂಬದಿ ಪೌಳಿಯ ಹೊರಭಾಗದಲ್ಲಿರುವುದೇ ಮಾಸ್ತಿ ಕಲ್ಲಿನ ವಿಗ್ರಹವಾಗಿದೆ. ಇದು ಸು. 5 ಅಡಿ ಎತ್ತರವಾಗಿದ್ದು ಎರಡೂವರೆ ಅಡಿ ಅಗಲವಾಗಿದೆ. ಇದರ ಕೆಳಭಾಗವು ಅಷ್ಟೇ ವಿಸ್ತೀರ್ಣವನ್ನು ಹೊಂದಿದೆ. ಇದು ಜೋಡಿ ವಿಗ್ರಹವಾಗಿದೆ. ಗಂಡನ ಚಿತ್ರಕ್ಕಿಂತ ಸ್ತ್ರೀ ವಿಗ್ರಹ ಸೌಂದರ್ಯವಾಗಿ ಸ್ವಲ್ಪ ಎತ್ತರದಲ್ಲಿ ಕೆತ್ತಲ್ಪಟ್ಟಿದೆ. ಈ ಜೋಡಿ ವಿಗ್ರಹದ ಮಧ್ಯ ಎರಡು ತುರುಬುಗಳು ವಿಗ್ರಹಕ್ಕೆ ಅಂಟಿ ಕೊಂಡಿವೆ. ಪುರುಷ ವಿಗ್ರಹದ ಬಲಗೈಯಲ್ಲಿ ಖಡ್ಗವಿದ್ದು, ಎಡಗೈ ಸೊಂಟದ ಬಳಿ ಇದು ಇರುವುದಲ್ಲದೆ ಸ್ತ್ರೀ ವಿಗ್ರಹದ ಬಲಗೈಯಲ್ಲಿ ನಿಂಬೆಹಣ್ಣು ತೋರುತ್ತದೆ. ಎಡಗೈಯಲ್ಲಿ ಗುರಾಣಿ ಕೆತ್ತಿದಂತೆ ಕಾಣುತ್ತದೆ. ಇದನ್ನು ಗ್ರಾನೈಟ್ ಶಿಲೆಯಲ್ಲಿ ಕೆತ್ತಲಾಗಿರುವುದನ್ನು ಕಾಣ ಬಹುದಾಗಿದೆ. ಈ ಮೇಲಿನ ಎಲ್ಲ ಲಕ್ಷಣಗಳನ್ನು ಹೊಂದಿದ ಮಾಸ್ತಿಕಲ್ಲಿನ ಜೋಡಿ ವಿಗ್ರಹದ ಶಿಲೆಯೊಂದು ಉಚ್ಚಂಗಿ ದುರ್ಗ ಚಿಕ್ಕ ಹೊಂಡದ ಪೂರ್ವದಿಕ್ಕಿನ ಅಂಚಿನಲ್ಲಿ ಕಾಣಬಹುದಾಗಿದೆ. ಉಚ್ಚಂಗಿ ದುರ್ಗದ ಜನತೆ ಇದನ್ನು ಗಂಗೆ ಎಂದು ಇಂದಿಗೂ ಪೂಜಿಸು ವುದು ಕಂಡುಬರುತ್ತದೆ.

## ಅಡಿಟಿಪ್ಪಣಿಗಳು :



1) ಹಾಲವಮ್ಮನ ಗುಡಿ ಮುಂದಿರುವ ಶಾಸನ
2) ಸಾ.ಇ.ಇ.ಸಂ 9 ಸಂಖ್ಯೆ 126
3) ಸಾ.ಇ.ಇ. ಸಂ 9 ಸಂಖ್ಯೆ 574
4) ಉಚ್ಚಂಗಿದುರ್ಗದ ಕೋಟೆಬಿಂತುಲ್ಲಿರುವ ಬಂಡೆ ಶಾಸನ
5) ಡಾ.ಸಿ.ಎಸ್. ಪಾಟೀಲ ಇತಿಹಾಸದರ್ಶನ ಸಂ. 11 ಪು. 156
6) ———————— " ———————— ಪು. 157
7) ಹಾಲವಮ್ಮನ ಗುಡಿ ಮುಂದಿರುವ ಶಾಸನ
8) ಸಾ.ಇ.ಇ. ಸಂ. 6 ಸಂಖ್ಯೆ. 575
9) ಎ.ಕ. (ಸಂ). 2 ಶ್ರವಣಬೆಳಗೊಳ 59 , ಎಂ.ಎ.ಆರ್ 1910 – 11 ಪು. 37
10) Vide Regd document No. 32 Dt 18.02.1976 with Sreemathi Bellary Neelamma. H.p.t.
11) ಡಾ. ಸಿ.ಎಸ್. ಪಾಟೀಲ ಇತಹಾಸದರ್ಶನ ಸಂ. 11. ಪುಟ. 157
12) ———————— " ———————— ದಿಕರ್ವಾಚಿ 1994
13) Indian Historical Research Distitute bombay printion in 1950 Hoysalavamsha Pege No. 258-59.
14) ಸಾ.ಇ.ಇ. ಸಂ. 6 ಸಂಖ್ಯೆ. 572
15) ———— " ———— 9 ಸಂಖ್ಯೆ. 126
16) ಡಾ.ಸಿ.ಎಸ್. ಪಾಟೀಲ ಇತಿಹಾಸದರ್ಶನ ಸಂ. 4 ಪು. 159
17) ಸಾ.ಇ.ಇ. ಸಂ. 6 ಸಂಖ್ಯೆ. 571
18) ಆರ್ ಶೇಷಶಾಸ್ತ್ರಿ, ಕರ್ನಾಟಕದ ವೀರಗಲ್ಲುಗಳು.
19) ಡಾ. ಎಂ.ಚಿದಾನಂದ ಮೂರ್ತಿ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ

## ಗ್ರಂಥಸೂಚಿ

ಕನ್ನಡ :

1.1 ಅರ್ಜುನ.ಯು. ಗೊಳಸಂಗಿ, 1995, ಗೊಳಸಂಗಿ ಒಂದು ಸಾಂಸ್ಕೃತಿಕ ಅಧ್ಯಯನ
ಮಲ್ಲಿಕಾರ್ಜುನ ಪ್ರಕಾಶನ, ಗೊಳಸಂಗಿ.

1.2 ಎಚಸ್ಕೆ(ಸಂ) 1985 ಕರ್ನಾಟಕದ ಪರಂಪರ ಸಮೀಕ್ಷೆ, ಬೆಂಗಳೂರು,
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ,ಬೆಂಗಳೂರು.

1 3 ಕೃಷ್ಣ, ಎಂ.ಹೆಚ್. 1950, ಕನ್ನಡ ನಾಡಿನ ಚರಿತ್ರೆ, ಭಾಗ —3 ಬೆಂಗಳೂರು
ಕನ್ನಡ ಸಾಹಿತ್ಯ ಪರಿಷತ್ತು.

1.4 ಕೃಷ್ಣರಾವ್, ಎಂ.ವಿ. ಮತ್ತು ಕೇಶವಭಟ,ಎಂ. 1970 ಕರ್ನಾಟಕದ ಇತಿಹಾಸ
ದರ್ಶನ ಬೆಂಗಳೂರು. ಕರ್ನಾಟಕ ಸಹಕಾರಿ ಪ್ರಕಾಶನ.

1.5 ಚಿದಾನಂದ ಮೂರ್ತಿ.ಎಂ. 1991 ಕರ್ನಾಟಕ ಸಂಸ್ಕೃತಿ ಬೆಂಗಳೂರು
ಕನ್ನಡ ಸಾಹಿತ್ಯ ಪರಿಷತ್ತು.

1.6 ಚಿದಾನಂದ ಮೂರ್ತಿ,ಎಂ. 1993 ಹೊಸತು—ಹೊಸತು, ಹಂಪಿಕನ್ನಡ ವಿಶ್ವವಿದ್ಯಾಲಯ
ಪ್ರಸಾರಂಗ, ವಿದ್ಯಾರಣ್ಯ.

1.8 ನಾಗಯ್ಯ.ಜಿ.ಎಂ. 1992 ಆರನೆಯ ವಿಕ್ರಮಾದಿತ್ಯನ ಶಾಸನಗಳು ಒಂದು
ಅಧ್ಯಯನ ಬೆಳಗಾವಿ. ವೀರಶೈವ ಅಧ್ಯಯನದ ಅಕಾಡೆಮಿ.

1.9 ಪಂಚಮುಖಿ. ಆರ್.ಎಸ್. 1967 ಕರ್ನಾಟಕ ಇತಿಹಾಸ ಸಂಶೋಧನಾ ಮಂಡಳಿ
ಧಾರವಾಡ, ಕರ್ನಾಟಕ ಇತಿಹಾಸ ಸಂಶೋಧನಾ ಮಂಡಳಿ.

1.10 ಮಹಾಬಲೇಶ್ವರ ಕಾಟ್ರಹಳ್ಳಿ,1993 ಬಾಗಿಳಿಯ ಬಾಗಳಿಗೆ, ಬೆಂಗಳೂರು.
ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು.

1.11 ಲಕ್ಷಣ ತೆಲಗಾವಿ,(ಸಂ) 1937, 'ಹರತಿಸಿರಿ' ಹರ್ತಿಕೋಟೆ, ವಾಲ್ಮೀಕಿ ಸಾಹಿತ್ಯ
ಸಂಪದ,

1.12 ವಸುಂಧರ ಫಿಲಿಯೋಜ, 1992, ಅಳಿದುಳಿದ ಹಂಪೆ, ಬೆಂಗಳೂರು
ಪ್ರೇಮಸಾಯಿ ಪ್ರಕಾಶನ.

1.13 ಶೇಕ್ ಅಲಿ.ಬಿ. ಎರಡನೇ ಆವೃತ್ತಿ 1984 ದಕ್ಷಿಣಭಾರತದ ಇತಿಹಾಸ , ಮೈಸೂರು
ಮೈಸೂರು ವಿಶ್ವವಿದ್ಯಾಲಯ.

1.14 ಸದಾಶಿವಪ್ಪಕಂಬಾ 1990, ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ, ಕುಂಚೂರು
ಮೂಲತೇಶ ಪ್ರಕಾಶನ.

1.15 ಸಂಪದ್ಗಿರಿರಾವ್.ಕೆ.(ಅಧ್ಯಕ್ಷರು) ಭಾಷಾಂತರ ಯೋಜನಾ ಸಮಿತಿ 1970,
ಕರ್ನಾಟಕ ಪರಂಪರೆ ಸಂ--1 ಮೈಸೂರು ರಾಜ್ಯ ಸರ್ಕಾರ.

1.16 ಸೂರ್ಯನಾಥ ಕಾಮತ್, ನಾಲ್ಕನೇ ಆವೃತ್ತಿ,1939 ಕರ್ನಾಟಕದ ಇತಿಹಾಸ
ಬೆಂಗಳೂರು, ಪ್ರಕಾಶ ಸಾಹಿತ್ಯ ಬೆಂಗಳೂರು.

1.17 ಹಂಪ ನಾಗರಾಜ, 1996 ವಿಷ್ಣುವರ್ಧನ, ವಿಜಯಾದಿತ್ಯ, ಕೀರ್ತಿವರ್ಮ,
ಪ್ರಸಾರಂಗ ಬೆಂಗಳೂರು ವಿಶ್ವವಿದ್ಯಾಲಯ.

2) <u>ನಿಯತಕಾಲಿಕೆಗಳು:</u>

2.1 16.4.1995 ಕನ್ನಡ ಪ್ರಭ ಬೆಂಗಳೂರು
2.2 10.1994 ದಿಕ್ಸೂಚಿ ಬೆಂಗಳೂರು
2.3 1.10.1992 ವಿಜಯಕಹಳೆ ದಾವಣಗೇರಿ
2.4 ಇತಿಹಾಸ ದರ್ಶನ ಸಂಪುಟಗಳು 5–6–11, 1993–94–96.

3) <u>ENGLISH BOOKS</u>

3.1 Epigraphia Karnatica Vol.I to XII (E.D.) Rice.B.L.
3.2 Epigrapia Karnataka - Vol.I to VIII (E.D.)Gopal. B.R. (Mysore Revised)
3.3 South Indian Incription Madras (SII)
3.4 Karnataka Incription Dharwad (K.I.)
3.5 Epigraphia India - Vols (E.I.)
3.6 Gazetteers of Bellary District.
3.7 Desai P.B.Jainism in South India and some Jain Epigraphs Sholapur 1957
3.8 Krishna Murthy, M.S. Nolambas Mysore 1980.
3.9 Harle.J.C. Gupta Sculpture.
3.10 Nagaraja Rao, M.S.,(E.D) Chalukyas of Badami.
3.11 Desai P.B.(E.D.) 1981 - History of Karnataka, Dharwar, Karnataka University.

4) <u>ಅಪ್ರಕಟಿತ ಕೃತಿಗಳು :</u>

4.1 ಹರಪನಹಳ್ಳಿ ಪಾಳೇಗಾರರು
4.2 ದಾದಯ್ಯ ರಂಗಯ್ಯ ಐತಿಹಾಸಿಕ ಕಾದಂಬರಿ-1

5. ಅಪ್ರಕಟಿತ ಶಾಸನಗಳು ಉಚ್ಚಂಗಿದುರ್ಗ. (ನೋಡಿ ಅನುಬಂಧ)

[illegible]

## ಉಚ್ಚಂಗಿದುರ್ಗದ ಚಿಕ್ಕ ಕ್ರೊಂಡದ [illegible] ಶಾಸನ

SII. VI 575

1 [ಶ್ರೀ] [illegible]

2 ಸ್ಸಗಂ ಪಗವಂಣಿಟ್ಟಾರಗಂ ಸತ್ಯಾಶ್ರಯಕುಳತಿಳಕಂ ಚಾಳುಕ್ಯಾಭರಣಂ ಶ್ರೀ

3 [illegible]

4 [illegible]

5 [ತ್ಪ]ತ್ರಂ ॥ ಸ್ವಸ್ತಿ ಸಮಸ್ತಲೋಕಾಶ್ರಯಂ ಸಮಸ್ತಭುವನಜನಾಶ್ರಯಂ ಆಹವಮಲ್ಲ

6 ದೇವನಂಕಕಾಱ ಪರಮಣ್ಣಾಳಸೂಱೆಕಾಱ ಕಟಕಪ್ರಾಕಾರಂ ವನಿ ಜನಾಧಾರಂ ನೃಗಿಮ-

7 ದಮರ್ದ್ದನ ಪ್ರತಾಪಜನಾರ್ದ್ದನನಚಳಿತವಾಕ್ಯ ಚಾಳುಕ್ಯಮಾಣಿಕ್ಯ ಶ್ರೀಕೇಳೀಸದ-

8 ನನಭಿನವಮದನ ವಿಪಕ್ಷಕುಳಕಾಳದಣ್ಡ ವೀರಮಾರ್ತ್ತಣ್ಡ ರಿಪುರಾಯಗಿರಿಂದ-

9 ಯ[ಸ]ಲ್ಲ ಸಾಹಸಮಲ್ಲ ದೀನಾನಾಥಚಿಂತಾಮಣಿ ಮಣ್ಡಳಿಕಮಕುಟಚೂಡಾಮ-

10 ಣಿ ವೇಂಗೀಮಣ್ಡಳೇಶ್ವರನಯ್ಯನದಣ್ಡ ಶ್ರೀವಿಷ್ಣುವರ್ದ್ಧನಮಹಾರಾಜ ವಿಜಯಾದಿತ್ಯದೇವರು

11 ನೊಳಂಬವಾಡಿಮೂವತ್ತಿರ್ಚ್ಛಾಸಿರಮುಮ ಸುಖಸಂಕಥಾವಿನೋದದಿಂದಾಳ್ವುರಾಜ್ಯ[ಂ]-

12 ಗೆಯ್ಯುತ್ತಮಿರೆ ॥ ಸಕವರ್ಷ ೯೯೬ ನೆಯ ಕ್ರೋಧಿ ಸಂವತ್ಸರದ ಚೈತ್ರದ ಪು-

13 ಣ್ಣಮಿ ಆದಿತ್ಯವಾರದ ವಸದಪರ್ವ್ವನಿಮಿತ್ತ(ಂ)ದಿಂ ಸೂಳವಾಳ ಮಾರಮಯ್ಯ

14 ಶ್ರೀಮನ್ಮಹಾಮಣ್ಡಳೇಶ್ವರಂ ಬಿಜ್ಜಲದೇವಗ್ಗೆ[ರ್] ಬಿನ್ನಪಂಗೆಯ್ದು ಮಾರೇಶ್ವ-

15 ರದೇವರ್ಗ್ಗೆ ಉಚ್ಚಂಗಿಯ(ಂ) ಕೋಟೆಯ ನೈರಿತ್ಯದ ದೆಸೆಯ ಪಡುವಳಗೆಱೆಯ

16 ಕೆಳಗಣ ಗೞ್ದೆಯ ನಿರ್ಮ್ಮಣ್ಣನೆ ತೋಂಟ ನಿತ್ಯವಂ ಕೋಟೆಯಲಱುವತ್ತಕ್ಕಟ-

17 ಗರುಂ ನಖರಮುಂ ಪಂಚಮಠಸ್ಥಾನಮುಮಱಿಯಲು ಸ್ವಸ್ತಿ ಯಮನಿಯಮಸ್ವಾ-

18 ಧ್ಯಾಯಧ್ಯಾನಧಾರಣಮೌನಾನುಷ್ಠಾನಜಪಸಮಾಧಿಸೀಲಷಡಂಗೋ-

19 ಪಹಾರಾದಿಸಂಪನ್ನರಪ್ಪ ಶ್ರೀಮತು ಖಳೇಶ್ವರಪಣ್ಡಿತರ ಕಾಲಂ ಕರ್ಚ್ಚಿ ಧಾ-

20 ರಾಪೂರ್ವ್ವಕಂಮಾಡಿ ಸರ್ವ್ವನಮಸ್ಯಮಾಗೆ ಬಿಟ್ಟುಕೊಟ್ಟರು ॥ ಈ ಕೆಱೆಯ ಭೂ-

21 ಮಿ ದೇವಗ್ಗೆ[ರ್] ಯೊನ್ದು ಭಾಗಮುಂ ಮಠಕ್ಕೆ ಯೆರಡು ಭಾಗ[ಮು]ಂ ನಡಸು-

22 ವರು ॥ ಈ ಧರ್ಮ್ಮಮನಾರೊರ್ವ್ವರು ಪ್ರತಿಪಾಳಿಸಿದರ್ಗ್ಗೆ ವಾರಣಾಸಿ ಕುರುಕ್ಷೇತ್ರ-

23 ಪ್ರಯಾಗೆ ಅರ್ಗ್ಘ್ಯತೀರ್ತ್ಥಂಗಳೊಳು ಸಾಸಿರಕವಿಲೆಯ ಕೋಡುಂ ಕೊ-

24 ಳಗುಮಂ ಪೊನ್ನಲು ಕಟ್ಟಿಸಿ ಸಾಸಿರ್ವ್ವರು ವೇದಪಾರಗರಪ್ಪ [ಬ್ರಾ]-

25 ಹ್ಮಣರ್ಗ್ಗೆ ದಾನಂಗೆಯ್ದ ಫಳಮಕ್ಕು ॥ ಈ ಧರ್ಮ್ಮಮನಳಿದವರ್ಗ್ಗೆ ಆ ತೀರ್ತ್ಥ-

26 [ದ]ಲು ಆ ಸಾಸಿರಕವಿಲೆಯುಮಂ ಸಾಸಿರ್ವ್ವರು ಬ್ರಾ(ಂ)ಹ್ಮಣರುಮ[ಂ]

27 ಸಾಸಿರಲಿಂಗಮುಮಂ ನಳಿದ ಪಂಚಮಹಾಪಾತಕನಕು [॥*] ಸ್ವದ-

28 ತ್ತಂ ಪರದತ್ತಂ ವಾ ಯೋ ಹರೇತಿ ವಸು(ಂ)ನ್ಧರಾ [ಂ ।*]ಷಷ್ಟಿರ್ವ್ವರಿಷಸಹಸ್ರಾ-

29 ಣಿ ವಿಷ್ಟಾಯಾಂ ಜಾಯತೇ ಕ್ರಿಮಿ ॥ ಸಾಮಾನ್ಯೋಯಂ ಧರ್ಮ್ಮಸೇತು-

30 ರ್ನ್ನೃಪಾಣಾಂ ಕಾಲೇ ಕಾಲೇ ಪಾಲನೀಯೋ ಭವದ್ಭಿಃ [।*] ಸರ್ವ್ವಾನೇತಾನ್(।)ಭಾ

31 ಗಿನಃ ಪಾರ್ತ್ಥಿವೇಂದ್ರಾನ್ ಭೂಯೋ ಭೂಯೋ ಯಾಚತೇ ರಾಮ-

32 ಚಂದ್ರ[ಃ*] ॥ ಅಳಿದವನಿದನೆಕ್ಕೋಟಿಯನಳಿದ[ಂ*] ತೀರ್ತ್ಥಂಗಳತು.

33 [ಮು]ನಿಂತುಂ ಮನೋರಂತಳಿದಂ ಪಸುವಂ ಪಾರುವರಂ ನಳಿದೆ-

34 ವ್ರಯೋದಿದ ನಾತನ ಜಪಜ್ಜಿಗೀಳದ[ಂ] ॥ ೬ ಸಿ[ಯ]

35 ಸ್ವಸ್ತಿ ಚಿತ್ರರಿಮ-

## ಹೊಲದಲ್ಲಿರುವ ಶಾಸನ

SII VI 571

1 [ನಮಸ್ತುಂಗ ಶಿರಶ್ಚುಂಬಿ]ಚನ್ದ್ರಚಾ[ಮ]ರ[ಚಾರ]ವೇ [ತ್ರೈ]ಳೋ]ಕ್ಯ[ನಗ]ರಾರಂಭಮೂಲಸ್ತಂಭಾ-
ಯ ಶಂಭವೆ . . . .

2 . . . . . . . . . .

3 . . . . . . . . . . ಪರಮೇಶ್ವರ ಪರಮಭಟ್ಟಾರಕ ಸ . . . . . .

4 . . . . . . . . . . ದೇವರ ವಿಜಯರಾಜ್ಯಮುತ್ತರೋ[ತ್ತ]ರಾಭಿವೃದ್ಧಿ ಪ್ರವ-
. . . . . .
. . . . . . . . . . ಮೊದಲಾ . . . . . .

5 . . . . . . . . . .

6 . . . . . . . . . . . . . . . . .

7 . . . . . . . . . . . . ಚಾಳು-
8 . . . . . . . . . . ದರ್ಪ್ಪಣರಾಮ . . . ಭೀಮ . . .
9 . . . . . . . . . . ರಾಜವಿದ್ಯಾ . . . .
10 ನಂದನ ಶ್ರೀ . . . . . . . . . . . [ಜ]ಯಸಿಂಘದೇವರು . . . . . . . . . .
11 . . ಸಿದ್ಧಿರ್ಸಿ . . . . . . . ಯ ನೆಲೆವೀಡಿನೊಳು . . . . .
12 . . . . . ರಾಜ್ಯಂಗೆಯುತ್ತಮಿರೆ ಸಕವರ್ಷ ೯೯[೨]ನೆಯ ಸಾಧಾರಣ ಸಂವತ್ಸರದ ಶ್ರಾವಣ ಸು-
13 ದ್ಧ ಪಾಡಿವ . . [ದ]ಣ್ಡನಾಯಕಂ ಶ್ರೀಮಾಳಪ್ಪಯ್ಯಂಗಳು ಮಹಾಸನ್ಧಿವಿಗ್ರಹಿ ದಣ್ಡನಾಯ[ಕ]
14 ಮಾರ . . . . . . ತರಸರ್ಗ್ಗೆ ಬಿನ್ನಪಂಗೆಯ್ಯೆ . . . . . . ಬೞಿಗೆ . . . . . .
15 ಚ್ಚಂಗಿಯ ಪರ್ವ್ವತಕ್ಕೆ ನಾಲ್ಕು ನಾಮ ಕೃತ[ಯುಗದಲ್ಲಿ] ಮೇಘ[ನಾದನೆಂಬ] ರಾಕ್ಷಸನ ನಾಂಸಮಿ-
ಪ್ಪರ್ದೆಱಿಂ ಮೇಘನಾ-
16 ದ[ಮೆಂತಿಪ್ಪ] ತ್ರೇತೆಯೊಳು ಹಿರಣ್ಯಾ[ನ] ನಿವಾಸವಾಗಿ . . . . . . . . . .
ಯೊಳು ಸುವರ್ಣ್ನ-
17 ವೃಷ್ಟಿ . . ದು [ಪ]ಡೆ[ದಂ] ಕನಕಗಿರಿಯೆಂಬ . . . ಯುತ್ತುಂಗ ಮಹಾಗಿರಿಯಾಕ್ರಮಂ
ಮತ್ತು[ಂ] ಕಾರಣದಿಂ ಚ-
18 ತು . . . . . . ಬಂದು ಕಲಿಯುಗದಂದುಚ್ಚಂಗಿಯಚ್ಚೆ ಯೆಂಬಳ್ಮೊದಲಾಗಿ ಮೂರ್ಧನ್ಯಬ್ರಾ-
ಹ್ಮಣಕನ್ಯಕೆ ಕು . . ರಾ .

---

19 ಶ್ವರವರಪ್ರಸಾದದಿ[ಂ] ದೇವತ್ವಮಂ ಪಡೆದರ್ಗ್ಗಂ . . ।[ವೃತ್ತಂ।] [ಉ]ಚ್ಚಂಗಿಪರ್ವ್ವತಮೆಂಬು .
. . , ಮೇಲೆ ಪರಸುರಾಮರ[ಂ]
20 . . ಪ್ರತಿಷ್ಟ . . . . . . ಗಬೀಜಬ್ಗಂ ತ್ರೇಜೋ . ರ್ಣರಂ[ಪ]ಡೆದಂ ಶ್ರೀಮಚ್ಚಾಳುಕ್ಯ-
[ಕು]-
21 ಲತಿಲಕ ಸ್ಥಲಪಚಕ್ರವರ್ತ್ತಿಯ [ವೀಟಿಗಳ] ಶ್ರೀ;ರೋ[ಕ್ಯ]ವೆಂಬುವ ಸ್ಥಾನಾಧಿಪತಿ ಶ್ರೀಮತ್ಸ್ವಯಂ-
[ತ್ರೀ]ಂ[ದ್ರ] ಬ-
22 ವೊಱಬಿಲ ನನ್ನೇಶ್ವರದಾಚಾರ್ಯ್ಯರ್ಕ್ಕಳಾಮುಖ ತಪೋಧನ ಸಕಲಕಳಾರಕ್ಷಾಪ್ರವೀಣರ್ಸ್ಸಮಸ್ತ-
ಗುಣಗಣಾ-
23 ಲಂಕೃತಶರೀರರಾತ್ರೇಯಗೋತ್ರಪವಿತ್ರಚತುರ್ದ್ದಶಪ್ರಮಾಣಸಿದ್ಧಾನ್ತವ್ಯಾಖ್ಯಾತತಾರ್ಕ್ಕಿಕ-
24 ಚಕ್ರವರ್ತ್ತಿ ಶ್ರೀಮತ್ಕಂಟಿಯ ವಖ್ಖಾಣದೇವರು ಅವರ ಶಿಷ್ಯರು । ಸ್ವಸ್ತಿ ಯಮನಿಯಮಸ್ವಾ-
25 ಧ್ಯಾಯಧ್ಯಾನಧಾರಣಮೌನಾನುಷ್ಠಾನಜಪಸಮಾಧಿಷಡಂಗೋಪಹಾರಾದಿಸಂಪನ್ನರ್ಸ್ಸಕಲ-
26 [ಶಾ]ಸ್ತ್ರಪಾರಾವಾರಪಾರಗರ್ಸ್ಸರಸ್ವತೀಕರ್ಣಾವತಂಸರಾತ್ರೇಯಗೋತ್ರಪವಿತ್ರರ್ಗ್ಗುರುಕು-
27 ಲಸಮುದ್ಧಾ[ರ]ಣರ್ಶ್ರೀಮಚ್ಚರಣಪಂಕಜಭ್ರಮರನಾಮಾದಿಸಮಸ್ತಪ್ರಸಸ್ತಿಸಹಿತಂ ಶ್ರೀ-
28 ಮದುಚ್ಚ[ಂ]ಗಿಯಕೋಟೆಯ ಸೋಮೇಶ್ವರಪಣ್ಡಿತರ [ಕಾ]ಲಂಕರ್ಚ್ಚಿ ಧಾರಾಪೂರ್ವ್ವಕಂ ಮಾಡಿ
ಗೃಹಸ್ತ್ರ.
29 ವೇಸದ ದಾನಶಾಲೆದೆಲುಚ್ಚಂಗಿಯಕೋಟೆಯ ಮೋಗಣ ತ್ರೈಲೋಕ್ಯೇಶ್ವರದೇವರ ಭೋಗಕ್ಕಂ ಗಂಟಿಗನಕೆಱೆ-
30 ಯಂ ಶ್ರೀಮತ್ತ್ರೈ[ಲೋ]ಕ್ಯಮಲ್ಲ ನೊಳಂಬಪಲ್ಲವ ಪೆರ್ಮಾಡಿ ಜಯಸಿಂಘದೇವರು ಬಿಟು ಕೊಟ್ಟರು
[।*]
31 ಸ್ವಸ್ತಿ ಸಮಧಿಗತಪಂಚಮಹಾಸಬ್ದಂ ಮಹಾಸಾಮನ್ತಾಧಿಪತಿ ಮಹಾಪ್ರಚಣ್ಡದ(ಂ)ಣ್ಡನಾಯಕಂ
32 ಆಸ್ಥಾನವಸ್ತುನಾಯಕಂ । ಸಕಲವಿದ್ವಜ್ಜನಾಮೃತಾರ್ಣ್ಣವಪೂರ್ಣಚನ್ದ್ರ ಸೂನೃತಪರಿಕ್ಷ್ಟನ್ದ್ರಂ
33 ಚತುರಚತುರ್ಮ್ಮುಖಂ ಪರಾಂಗನಾಪರಾಙ್ಮುಖಂ ವಿನಯವಿಭೂಷಣಂ ಸುವಾಚಕವರಿಶೋಷಣಂ
34 ಪರಮಣ್ಡಲಿಖಣ್ಡವಖಣ್ಡನಸ್ವನಂ । ವಿಭವಸ[ಂ]ಕ್ರನ್ದನಂ ಬ[ಂ]ಧುಜನಚಿನ್ತಾಮಣಿ । ದಣ್ಡನಾಯ-
ಕಸಿ-
35 ಖಾಮಣಿ ಭಾಷಾಚತುರ್ಭುಜಂ । ಸುಜನಮಖರಧ್ವಜಂ । [ಶಾ]ನ್ತ್ರಕಾಸ್ತೇಯಂ । ಪತಿಹಿತಸೈನಲೇಯ-
[ಂ] । ಪರಚ-
36 ಕ್ರವರ್ಕ್ಯಂ ಶಿಂಘನಚಕ್ರಂ ನಾಮಾದಿಪ್ರಸಸ್ತಿಸಹಿತಂ ಶ್ರೀಮದ್ದಣ್ಡನಾಯಕ ದಾಸಪಯ್ಯಂ ಉಚ್ಚಂಗಿಮೂವ-
37 ತ್ತುಮನಾಳುತ್ತಮಿಬ್ಬು ಗಂಟಿಗನಕೆಱೆಯುಮ ಪ್ರೊಳಗಣ [ಗದ್ದೆಯುಂ] ಪೊಡೆಸಿರ್ಪ್ಪರ್ತ್ತಾ[ಱು] ಮತ್ತ-
ರ್ಪ್ಪದ್ದಲೆಯಿಂ ಬಿಟ್ಟು ಕೊಟ್ಟರ್ ಸ್ವಸ್ತಿ ಸಮಸ್ತಗು-

## 575ನೆಯ ಶಾಸನದಲ್ಲಿರುವ ಮತ್ತೊಂದು ಶಾಸನ.

SII VI 576

1. ◎ ಸ್ವಸ್ತಿ ಯಮನಿಯಮಸ್ವಾಧ್ಯಾಯಧ್ಯಾನಧಾರಣಮೌನಾನುಷ್ಠಾನಜ-
2 ಪಸೋಮನಿಯಮಸಮಾಧಿಸ[ಂ]ಪನ್ನರಪ್ಪ ಶ್ರೀಮ[ದೇ]ಣಿಯ
3 . . . . . . . . ಪೂ[ವ]ತ್ತಲ ರಾಜಧಾನಿ ಉಚ್ಚಂಗಿಯ ಕೋಟೆಯ ಕಲ್ಲಕೆಱೆಯ
4 ಕೆಳಗಣ . . ಶ್ವರದೇವರ ಬಲವಕ್ಕದ . . . . . . . . ಯೆರ್ವ್ವತಿ-
5 ಸೆಟ್ಟಿಯ : . . . . . . . ಚಂದ್ರಕಲಾ . . . ವೇಕೆ-
6 ಚೆಯ . . . . . . . . . . .
7 ಚೆ ಮತ್ತಬ್ಬೆಬ್ಬಿಲು ತನ್ನುತ್ತ ಮ . . . . . ಪತ್ತರ್ಕ್ಕದಕಯ್ಯ
8 ಫಲಮಾಡಿಕೊಳ್ವರ್. ॥ ಸ್ವಸ್ತಿ ಸಮಧಿಗತಪಂಚಮಹಾಸಬ್ದ ಮ-
9 ಹಾಸಾಮನ್ತಾಧಿಪತಿ ಮಹಾಪ್ರಚಣ್ಡದಣ್ಡನಾಯಕ ನೀ-
10 . . ಸನಸು ನಾಯಕಂ ಸು . . . ನಮನಸ್ಸರೋಜಿನೀರಾಜ-
11 ಹಂಸ ವಿದಗ್ಧವಿದ್ವಜ್ಜನಕರ್ಣ್ನ . . . . ವಿಪಿನದಾವಾನಳಂ ಪ-
12 ರವಿಜಯಕಾಳಾಯುಧಂ . . . . . . . ನನಪಾತ್ರಿ-
13 ತಾರ್ತ್ತಿಜನ ಕೃತಾರ್ತ್ತೀಕೃತ . . .

## ಬಡಗೇರ ಮಟ್ಟಿಯಲ್ಲಿನ ಶಾಸನ

SII VI 572

1 [ನಮ]ಶ್ಶಿ[ವಾಯ] ನಮಸ್ತುಂಗಶಿರಶ್ಚುಂಬಿಚನ್ದ್ರಚಾಮರಚಾರವೇ ತ್ರೈ . . . . . ಮೂ-
ಲಸ್ತಂ.
2 ಭಾಯ ಶಂಭವೇ ॥ ಶ್ರೀರಮಣೀಮನೋರಮ . . . . . . . . . .
3 ನಿತಂತ್ತನೆ . . . . . . . . . . . . . . . . . . . . . . .
ಪೆಂಡ[ನ]
4 . ಕೋಪಜಗಜ್ಜನ . . . . . . . . . . . . . . . . . . . .
. .
5 ಲಾದತದನ್ವಯ . . . . . . . . . . . . . . . . ಸ್ತುತ್ಯಾಚಾರ್ಯ್ಯಯ-
ಕೋಸಿಧಿ . . .
6 ತದ್ವಂಶದೊಳು . . . . . . . . . . . . . . . . ವಿಖ್ಯಾತಕೀರ್ತ್ತಿಧ್ವಜ
. . . .
7 ತ್ರಿಯ ಗಜ[ಪ]ತಿ. . . . . . . . . . . . . . . . . . . ನ್ತ್ಯಂತ-
ಸಮುದ್ಭ್ರಾಂತ
8 ನಯವಿಖ್ಯಾತ . . . . . . . ತತ್ತನೂಜಾತನಾ[ಥ]ಯ . . [illegible] . . . . .
. . .
[illegible]
10 [illegible] . [illegible] . . . . ॥ ವೃ॥ . . . .
ರಾತಿ-
11 ವೇಳಾವಳಯಿತವಸುಂಧ . . . . [ರ]ಕ್ಷಕ . . ಮಪಾಂಡ್ಯಪತಿ . . . . . . . .
. . . ರಾಜ-
12 ನ್ಯಕಶೌರ್ಯ್ಯಾನ್ವಿತಪ್ರ್ಪಂಡಿತ . . . . ನೆಗಳ್ದ ವಿಜಯಪಾ[ಂ]ಡ್ಯಕ್ಷಿಮಾನಂದ[illegible]-
ರಾಗಲು
13 . ಪಾತ್ರಿಂ . ಕ್ಷಮಿ[ಯಮ]ಮೌನಿಯೊ[ಪ್ಪಂ]ತಾನೆರ್ದ್ದ[ಳ್ಪ]ತಾ[ನ್ವೊ]ನ್ವಳು ॥ ಅನ್ತ[ಂ]ಪ್ಲೊಗ-
14 ಳ್ತಗ[ಂ] ನೆಗಳ್ತಗಂ ನ್ನೆಲೆಯಾದ ಸೌವಲದೇವಿಯಾದ ತನೂಭವರೊಳು ಶ್ರೀಭವನಿ . . . . . .
15 . ಮದೇಭಶ್ರೀದತನೋಳಲ[ಂ] ನೆಗಳ್ದ ರಾಜ್ಯಶ್ರೀಗೆ ತಾನಿಕ್ಕಿಂದಾನೇ . ವಲ್ಲಭೆಗ[ಂ] ಶ್ರೀ . .
. . . ಜಯ-
16 ಪ್ರಿಯನೊಡು [ರ]ಕ್ಷಿ[ಸಂ]ನವಿ ಳಭಾಗೀರಥಕೀರ್ತ್ತಿಶ್ರೀಗೆ ಸ . . . ಮಿಸಲು ಪಂಡಿತ-
ಪಾಣ್ಡ್ಯಭೂಪ[ನ]-

17 ನಿಸಿದಂ ಭೂಪಾಳವಿದ್ಯಾ[ರತಂ] । ತದನುಜಾತಂ ॥ . . . . . . . . . ಪರಮ[ಹೇ]-
18 ಪಾಳಕೀರ್ತ್ತಿ[ಗರಂ] ಚೋಡನಗರೆಯಸಾರಮೆಲ್ಲನುಂ . . . . . . . . . ನೆನಿ-
19 [ಸಿ]ದಶ್ರೀ . . . ಪಾಣ್ಡ್ಯಮಹಿಪಂಗೆ . . . . . . ಪರಿವರ್ಗ್ಗ ಕೆಱೆಯುಂ ಅಱುಗ[ನ್ಕು]-
20 . . ತಂ ನೆಗ[ಳ್ದ] ಭೂಭುವನೈಕ . . . . . . . . . . . . . . ರಾ-
ಲೋಕೈಕ-
21 . . . . . . . . . . . . . . . . . . . . . . .
22 ಮಹಾಪೂರ್ವ್ವಾರ್ಣ[ವ]ಶ್ರೀಣಿಕಾಂತಂ . . . ನಾಮಾಶ್ರೀಪದೆಯಕೋಳ್ಾಗಿ . . . ಧೈರ್ಯ್ಯ-
ಶೌರ್ಯ್ಯಪ್ರಭಾವ[ವಿ]-
23 ಸರಪ್ರಖ್ಯಾತ[ರಾ]ಜನಾದವಿಜಯಪಾಂಡ್ಯಾವನಿಪಾಳನ ಶ್ರೀ । ಗದ್ಯ ॥ ಸ್ವಸ್ತಿ ಸಮಧಿಗತಪಂಚಮಹಾ-
ಶಬ್ದ ಮಹಾ-
24 ಮಂಡಳೇಶ್ವರಂ ಕಾಂಚೀಪುರವರಾಧೀಶ್ವರಂ ಯಾದವವಂಶಾಂಬರದ್ಯುಮಣಿ ಸುಭಟಚೂಡಾಮಣಿ
25 ಮಹೇಂದ್ರಮಣಿಮಕುಟಕೋಟಿವಿಘಟಿತನಿಜವಿಜಯಕೃತಕಂಕಣಂ ಲೀಲಾಮಾತ್ರ[ವಿ]-
26 ಜಿತಸಪ್ತಕೊಂಕಣಮನೇಕ . . ಪೇಳಾಸ್ಥಾಪಿತಪಾ . . . . . ಜಯಸ್ತಂಭಂ ದೂರೀಕೃತಾ-
ರಾ[ತಿ][ಕ]ರಾ-
27 [ಟ]ಷ್ಟಂಭಂ ತಾಂಬ್ರಪರ್ಣ್ಣೀನಿರ್ಣ್ಣಿಕ್ತ . . ಕೇಶಯ[ಂ] । . . . . ರತ್ನಾಕರ . . .
. ಮುದ್ರಿತಭಾಂಡಾಗಾರಂ ಮ-
28 ಳಯಭಾಗೀರ[ಥಿ] . . . . . . ಕಟಿನ . . . . । . . . . . ಶ್ರೀಗುಣಾಗಾ-
ರಂ ಕಿಂಕರೀಕೃ-
29 ತಭೂಪ[ನ]ರುಪಮಂಡಳೇಶ್ವರಕ್ರಿತಾನ್ತಕೇಶ[ಯ]ಶ್ರೀಪೋ . . ಮಂಡಳಪಾಳಗೃಹೀತಾನೇಕಜಳ-
ಶೈಳಮಾ-
30 ರ್ಗ್ಗಂ ವ(ಂ)ಸ್ಥೀಕೃತಾರಾತಿಮಂಡಳಿಕವಗ . . ಕಂ ಕೀರ್ತ್ತಿನಾರಾಯಣದೇವಚರಣಯುಗಳಸ್ಮರಣ-
ಪರಿ-
31 ಚಿತಾಂತಃಕರಣಂ ಯಾದವಾಭರಣಂ ಪಾಂಡ್ಯಕುಳಕಮಳಮಾರ್ತ್ತಂಡಂ ಪ[ರಿ]ಚ್ಛೇದಿಗಂಡಂ ರಾಚಿಗ-
32 [ಚೋ]ಳಮನೋಭಂಗಂ ಸಾಹಸೋತ್ತುಂಗಂ ನಿಖಿಳನಾಮಾವಳೀವಿರಾಜಿತಮಪ್ಪ ಶ್ರೀಮನ್ಮಹಾಮಂಡಳೇ-
ಶ್ವರಂ
33 ವಿಜಯಪಾಂಡ್ಯದೇವರು ಸೊಣಂಬವಾಡಿ . . . . . . . . ನುಚ್ಚಂಗಿಯ ನೆಲೆವೀಡಿ[ನೊ]-
34 ಳು ದುಷ್ಟನಿಗ್ರಹ ಶಿಷ್ಟಪ್ರತಿಪಾಲ . . . . . . . . ರಾಜ್ಯಂಗೆಯ್ಯುತ್ತಮಿ-
35 ರೆ ತತ್ಪಾದಪದ್ಮೋಪಜೀವಿ ॥ . . . . . . . . . . . . . . . .
36 ಫಳಾಫಭಿಸ್ತಿದಿತ . . . . . . . . . . . . . .
37 ಪ್ರಕಟಯನ ಜೀಯಾಚ್ಚಿರಂ . . . . . . . . . . . . . . .
38 ಹೆಮ್ಮಾಡಿದಂಡಾಧಿಪಂ ॥ ಎನಿಸಿದ ಮಹಾ . . . . . . . .
39 ಕನು ॥ ಶ್ರೀಮತುವಿಜಯಪಾಂಡ್ಯದೇವರ್ಗ್ಗೆ . . . . . . . . . ನಾಥದೇ-
40 ವರಂಗಭೋಗಕ್ಕಂ ರಂಗಭೋಗಕ್ಕಂ ದೇವಾಲಯದ ಜೀ[ರ್ಣ್ಣೋದ್ಧಾರ]ಕ್ಕಂ ಶಕವರುಷದ [೧೦]
41 ೧೦೭೭ನೆಯ ಪಾರ್ತ್ಥಿವಸಂವತ್ಸರದಾಷಾಢದ ಪುಣ್ಣಮಿ . . . . . . . ಸೋಮಗ್ರಹಣ ವ್ಯ-
42 ತೀಪಾದದ(ಂ)ನ್ದು ಬಿಡಿಸಿದ ಧರ್ಮ್ಮವೆನ್ತೆಂದೆಡೆ [ಇ] ಯುಚ್ಚಂಗಿಯ ಪಟ್ಟಣದಲು ಹೇರುವ ಸೆಟ್ಟಿಗ-
ಳೇ[ರಿ]-
43 ಗೆ ಪ್ರತ್ಯೇಕವರಿಷಕ್ಕೆ ಪಾಗ ೨ ಅ ಲೆಕ್ಕದಲೇರುವ . ಒನ್ದುದೇಱಿಗೆ . [ಅ]ನ್ನವಾಪ್ರದಾಚಂದ್ರಂ
ಮೂಲ-
44 ಗೊಲವಮಾನವತಿರುವೆಲಿಂಗದಿಯನಿತಲು ಸೊಟಗೆ ಭತ್ತವನೆತ್ತುವರು ನನ್ದಾದೀವಿಗೆಗೆ ಮಣ .
45 ಪಿಸಹಿತ ನಡವ ಗಾಣ[ಕ್ಕೆ] ಚಟ್ಟನಹಳ್ಳಿಯ ಚಟ್ಟನಕೆಱೆಯ ಬಡಗಣ ಕೋಡಿಯಿಂ ಬಡಗಣ ಚಿಂಗನ-
46 [ನ]ಕೆಱೆಯ [ನೀ]ರುವಣ್ಣವಳ್ಳಿಯ ಬದ್ದಲೆಯ ಸೀಮೆ ಪಡುವಲು ಚಟ್ಟನಹಳ್ಳಿಯ ದಾರಿ ಮೇ-
47 ರೆ ಬಡಗಲು ಕೆಱೆಯೊಳಗಣ ಕಟ್ಟೆ ಮೂಡಲು ಬೆಣ್ಣಬೀಗಲು ತೆಂಕಲು ಬಮ್ಮನಕೊಳದಿಂ ತೆಂಕಲು ಸಾಗಿ-
48 ದ ಹಳ್ಳದ ಪಡುವಣ ಸೀಮೆ ತೆಂಕಲಾಪಿನಹಳ್ಳ ಮೇರೆ ಯಿಂತೀಧರ್ಮ್ಮಮಂ ನಾರಾಣನುಂ ಪ್ರತಿಪಾಳಿಸಿದ-
49 ಮರೆಯಿ ಸ್ವಾಮಿಕವಿಲೆಯ ಕೋದುಂ ಕೊಳಗುಮಂ ಹೊಂನಲು ಬೆಳ್ಳಿಯಲು ಕಟ್ಟಿಸಿ ವಾರಣಾಸಿ-

ತವಕ್ಲೇಶ್ವರ ದೇವಾಲಯದ ಶಿಲಾಶಾಸನ.

SII IX Pt-I 126.

8 . . . ನವಮಡನಂ ವಿಪಕ್ಷಕುಳಕಾನನದಹ್ನ ಪ್ರಿಯವಾರ್ತ್ತ ಗಪುರಾಪುರ[ವರ]ಸ್ತ್ರೀಯು ಸೆಲ್ಲಂ ಸಾಹಸನುಲ್ಲಂ ದೀನಾನಾಥಚಿಂತಾಮ-

9 [ಣಿ ಮ]ಣ್ಡಳಿಕಮಕುಟಚೂಡಾಮಣಿ ವೆಂಗಿಮಣ್ಡಳೇಶ್ವರನಯ್ಯನದೇವಂ ಶ್ರೀವಿಷ್ಣುವರ್ದ್ಧನಮಹಾ-ರಾಜವಿಜಯಾದಿತ್ಯ ದೇವನನ್ವರ್ಗಳೆಂಬನಾ-

10 [ಡ ಮೂ]ವತ್ತಿಚ್ಛಾರ್ಸಿರವಂ ಸುಖಸಂಕಥಾವಿನೋದದಿನಾಳ್ವ ರಾಜ್ಯಂಗೆಯ್ಯುತ್ತಿರೆ ॥ ವೃತ್ತ ॥ ಪರ-ಹಿತದಿಂದೆ ಸಂದ ನಿಬುಧಂ ಮನೆನೆಗ್ಗರ್ಡೆ ದಣ್ತಿ/

11 . . ಮ . ಣ(ಮೂಕರಾಜ ವಿಭು ಬಿನ್ನವಿಸಲ್ಪರಿದಕ್ಷಿಯಿಂದನಾ ಸುರುಚಿರಕೀರ್ತಿ ದಾನ-ನಿಧಿ ಬಿಜ್ಜಲದೇವನನೂನಧಾವಿರ್ಕ್ಕರಂ

12 . . . ಣಯನಿತ್ತನೆಯ್ದೆ ಗಳಗೇಶ್ವರದೇವರಿಗೇಂ ಕೃತಾರ್ತ್ಥನೋ ॥ ಸಕವರ್ಷ ೯೮೬ ನೆಯ ಕ್ರೋ-ಧಿಸಂವತ್ಸರದ ಚೈತ್ರದ ಪೌರ್ಣ್ನಮಾ-

13 ಸೆಯಾದಿತ್ಯವಾರಂ ವನದಪರ್ವ್ವನಿಮಿತ್ತಂ ಗಳಗೇಶ್ವರದೇವರ್ಗೆ ಯಬ್ಬಂಗಿಯಕೋಟೆಯೊಳು ಕೆಂಕ ಬಣ್ತಸಿಗೆಹೆಯುಮಂ

14 ದೇವರ ಮುನ್ದೆ ಪನ್ನಿಮ್ಮರ್ತ್ತಬ್ಬೆರ್ಬ್ಬಲೆಯುಮಂ ಬ . . ವತೋಂಟಮುಮಂ ಪೂರ್ವ್ವದಲು ನಡೆಯುತ್ತಂ ಬನ್ನಿಸಲ್ಪದ ಚೋಳಗಾವುಣ್ದನ

15 ಕಟ್ಟಮುಮಂ ಕಳೇಶ್ವರಪಣ್ಡಿತರ ಕಾಲಂ ಕರ್ಚ್ಚಿ ಧಾರಾಪೂರ್ವ್ವಕಂ ಸರ್ವ್ವನಮಸ್ಯಂ ಮಾಡಿ ಗಳ್ಗೇ-ಶ್ವರದೇವರ್ಗೆ ಬಿಟ್ಟರೀ ಭೂಮಿ ದೇವರಿಗೊಂ-

16 ದುಭಾಗಂ ಮಟಕ್ಕೆಗಡುಭಾಗಮೀ ಧರ್ಮ್ಮನಂ ಪ್ರತಿಪಾಳಿಸಿದವ(ಗ)ರಗಙ್ಗೆಯ ತೀರ್ತ್ಥದೊಳ್ ಪ್ರಯಾಗೆ ಕುರುಕ್ಷೇ(ತ್ರ) ವಾರಣಾಸಿಯೆಂಬೀ ಪುಣ್ಯಕ್ಷೇ-

17 ತ್ರದೊಳ್ ಪನ್ನಿಸಾಸಿರ ಕವಿಲೆಯಂ ಪನ್ನಿಚ್ಛಾಸಿರ್ವ್ವರ್ವ್ವೇದಪಾರಗರಪ್ಪ ಬ್ರಾಹ್ಮಣರ್ಗ್ಗೆ ದಾನಂಗೆಯ್ದ ಫಳಮಿದಂ ಳದಾ-

18 ನಾ ಕ್ಷೇತ್ರದೊಳಾ ಕವಿಳ[ಯು*]ಮಾ ಬ್ರಾಹ್ಮಣರುಮನಳಿದ ಮಹಾಪಾತಕನಕ್ಕು ಇದಂ ಈ ಧರ್ಮ್ಮಮುಮ-ಸ್ಥಾನಂ ನಕರಂ ರಕ್ಷಿಸುವರ್ ॥

19 ಸ್ವದತ್ತಂ ಪರದತ್ತಂ ವಾ ಯೋ ಹರೇತಿ ವಸುಂಧರಾ । ಷಷ್ಟಿರ್ವರ್ಷಸಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿಃ ॥

*Second Face.*

20 ಕದಂಬಾನಾಡಿನಾಡ ಮಧ್ಯದೊಳ್ಮೇರುವಿಪ್ಪಂತಿರ್ದುದುಚ್ಚಂಗಿಯ ಪರ್ವ್ವತಂ ಅದಕ್ಕೆ ನಾಲ್ಕು ನಾಮಂ ಪ-
ದೆಂ-

21 ತೆಂದೊಡೆ ಕೃತಯುಗದೊಳು ಮೋ[ಘನಾ]ದನೆಂಬ ರಾಕ್ಷಸನಿವಾಸಮಪ್ಪುದರಿಂ ಮೋಘನಾ-

22 ದನೆಂಬುದು ತ್ರೇತೆಯೊಳ್ ಹಿರಣ್ಯಕನಿವಾಸಮಾತನ ನಾರಾಯಣಂ ವಧೆಗೆಯ್ವಂದಿನೊಸ-

23 ಗೆಯೊಳ್ ಸ್ವರ್ಣ್ನವೃಷ್ಟಿ ಕರೆದುದರಿಂ ವೀರಕನಕಗಿರಿಯೆಂಬುದು ದ್ವಾಪರದೊಳುತ್ತುಂಗಮ-

24 ಹರಿಷಿ ಆಶ್ರಮಮಪ್ಪುದರಿಂ ಉತ್ತುಂಗಪರ್ವ್ವತಮೆಂಬುದು ಕಲಿಯುಗದೊಳ್ ಉಚ್ಚಂಗಿಯ-

25 ಬ್ಬೆಯೆಂಬಳು ಮೊದಲಾಗಿ ಮೂವರು ಬ್ರಾಹ್ಮಣಕನ್ನಿಕೆಯರು ತಪಂಗೆಯ್ದೀಶ್ವರವರ-

26 ಪ್ರಸಾದದಿಂ ದೇವತ್ವಮಂ ಪಡೆದರದರಿಂದುಚ್ಚಂಗಿಯಾಪರ್ವ್ವತಮೆಂಬುದು ಆ ಪ-

27 ರ್ವ್ವತದ ಮೂಡಣದೆಸೆಯೊಳು ಹಿಡಿಂಬವನಮಾ ಬನದೊಳಗೆ ಸ್ವಯಂಭುಕಲಿದೇ-

28 ವಸ್ವಾಮಿಯೆಂಬುದು ಆ ದೇವರ್ಗ್ಗೆ ದೇಗುಲವಮ್ಮಾಡಿಸಿದಳು ಹಿಡಿಂಬೆ . . ದಿತ್ತ

29 ಹಿಡಿಂಬೇಶ್ವರಮೆಂಬುದು ಆ ಲಿಂಗಂ ಪೆರ್ಚ್ಚೆ ಪೆರ್ಚ್ಚುವ ಕಾರಣದಿಂ ಕಳೇಶ್ವರಮದವ್ಯೃತಲಿಂಗದೇ[ಪರ್]

20 ಪ್ರಸನ್ನತೆಯಿಂ ಕಣ್ಣಾ ಶ್ರೀಮದ್ದಣ್ಡನಾಯಕ ದೇವಪಯ್ಯ ಉಚ್ಚಂಗಿ ಮೂವತ್ತುಮನಾಳುತ್ತ(ಮನಾ-
ಳುತ್ತ)ಮಿ-

31 ರ್ದ್ದು ದೇಗುಲದ ಅಧಿಷ್ಠಾನಮಂ ಕಟ್ಟಿಸಿ ಮಠ ಮಗ್ಗಲು ಬಾವಿಯೆಂಬಿವಂ ಮಾಡಿಸಿ ಪ್ರಧಾನರ್ಗ್ಗರಿಪಿದ

32 ದೇವರ್ಗ್ಗೆ ಭೋಗಮಪ್ಪಂತಾಗಿ ಅರಸರ್ಗ್ಗೆ ಬಿನ್ನಹಂಗೆಯ್ವುದೆಂದೊಡೆ ಶ್ರೀಮನ್ಮಹಾಪ್ರಧಾನ ದಣ್ಡ-
ನಾಯಕ ನಾಗದೇ-

33 ವಯ್ಯನುಂ ದಣ್ಡನಾಯಕ ಏಚಕಯ್ಯನು ಶ್ರೀಮತ್ಸನ್ಧಿವಿಗ್ರಹಿ ದಣ್ಡನಾಯಕ ಮಾರಮಯ್ಯನು

34 ಸನ್ಧಿವಿಗ್ರಹಿ ಕಾಳಿದಾಸಭಟ್ಟರು ಅರಸರ್ಗ್ಗೆ ಬಿನ್ನಪಂಗೆಯ್ದರು ರಾವಿಭಟ್ಟರಂ ಬಿದುವರೆಂದೊಡ-

35 ರಸರು ಈಚ್ಚೆಯಿದರ್ [||*] ಸ್ವಸ್ತಿ ಸಮಸ್ತಭುವನಾಶ್ರಯ ಶ್ರೀಪೃಥ್ವೀವಲ್ಲಭ ಮಹಾರಾಜಾಧಿರಾಜ
ಪರಮೇಶ್ವರ

36 ಪರಮಭಟ್ಟಾರಕ ಸತ್ಯಾಶ್ರಯಕುಲತಿಳಕ ಚಾಳುಕ್ಯಾಭರಣ ಶ್ರೀಮತ್ತ್ರಿಭುವನಮಲ್ಲದೇವರು ವಿಜ-

37 ಯರಾಜ್ಯಮುತ್ತರೋತ್ತರಾಭಿವೃದ್ಧಿಪ್ರವರ್ದ್ಧಮಾನಮಾ ಚನ್ದ್ರಾರ್ಕ್ಕತಾರಂಬರಂ . . . . . ಸಲ-
ನುಜ

38 ಸ್ವಸ್ತಿ ಸಮಸ್ತಭುವನಸ್ತುತಮಹಾಮಣ್ಡಲೇಶ್ವರ ಪಲ್ಲವಾನ್ವಯ,

(S)tops here abruptly.

ಉಚ್ಚಂಗಿಯ ದೇವಾಲಯದ ಬಲಕ್ಕೆ ರುವ ಕಲ್ಲು.

೧ ಶ್ರೀ ಶಾಲಿವಾಹನ ಶಕ ವರುಷಗಳು ೧೬೫೨ ನೆ ಕ್ರೋಧನ ಸಂವತ್-

೨ ಸರದ ವೈಶಾಖ ಶುದ್ಧ ೩ ಲು ಶ್ರೀ-

೩ ಮತು ರಾಮರಾಜ/ಅಯನವರು ಅಸಮಾನ-

೪ ದಮುಲ/ನಾಯಕ/ಮಕ್ಕಳು ತಂಮ

೫ ತಂಮ ಸೀಮೆಯ ಸಪ್ಪಳು ಬರ-

೬ ದು ಆಬೀಜಯ ಗುಳಿ ನಾ-.

೭ ಯಕು ನಿಜವಾದ ಯಕು ಊರಿತ-

೮ ಯ ದೇವತೆಯ ಗುಡಿಗೆ ತೇಯುವ ತಾಳವ-

೯ ರಿ ರೊಂಕವನು ನಾವು ದೇವತೆಯ

೧೦ ನಂದಾದೀಪಕೆಸ್ಕೆಬೆಂದುಕೆ ನಾ-

೧೧ ಉ ಬಿಂಟವು ಯುಂದಕೆವೆರು ಆ .

೧೨ ಆ ರೊಂಕವ ಕೊಂಡರು ಆವರು ತಂಮ ತಾ-

೧೩ ಯಿಗೆ ತಂ/ಆವರು/ಕಯಕ್ಕಿಯ ತು-

೧೪ ಣೆ ಆವರು ಗೋವ ಹಲಾಹಿ ಕೊಂದ ಪಾಪ-

೧೫ ಕೆ ಹೋದವರು ಶ್ರೀಉಚ್ಚಂಗಿಯ ದೇವತೆ

೧೬ . ಕಮ ಶ್ರೀ . ಕಿಸೋಡಿಕೆಕೊಂಡರು



# ಅಪ್ರಕಟಿತ ಶಾಸನಗಳು

## ಕಾಲ್ವ್ಯಾಣ ದೇವಾಲಯದ ಮುಂದಿರುವ ಶಾಸನ

೧. ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ। ತ್ರೈಲೋಕ್ಯನಗರಾ
ರಂಭಮೂಲ -

೨. ಸ್ತಂಭಾಯ ಶಂಭವೇ॥ ಸ್ವಸ್ತಿ ಸಮಸ್ತ ಭುವನಾಶ್ರಯಂ ಶ್ರೀ
ಪೃಥ್ವೀ ವಲ್ಲ -

೩ ಭ ಮಹಾರಾಜಾಧಿರಾಜ ರಾಜಪರಮೇಶ್ವರ ಪರಮಭಟ್ಟಾರಕಂ
ಸತ್ಯಾಶ್ರಯ ಕುಳತಿಳ -

೪ ಕಂ ಚಾಳುಕ್ಯಾಭರಣಂ ಶ್ರೀಮತ್ರಿಭುವನಮಲ್ಲದೇವರ ವಿಜ
ಯರಾಜ್ಯಮುತ್ತರೋತ್ತ -

೫ ರಾಭಿವೃದ್ಧಿ ಪ್ರವರ್ದ್ಧಮಾನ ಮಾಚಂದ್ರಾರ್ಕತಾರಂಬರಂ ಸಲು
ತ್ತಮಿರೆ ತತ್ಪಾದ ಪದ್ಮೋ -

೬ ಜೀವಿ॥ ಸ್ವಸ್ತಿ ಸಮಧಿಗತ ಪಂಚ ಮಹಾಶಬ್ದ ಮಹಾಮಂಡಳೇಶ್ವರಂ ...
..

೭. ಪುರವರೇಶ್ವರಂ ಯುದ್ಧನಾಂಬರ ದ್ಯುಮಣಿ ಸುಭಟ ಚೂಡಾ
ಮಣಿ ನಿಜಕುಳರ -

೮. ಕುಳ ಮಾರ್ತ್ತಣ್ಡಂ ಪಡಿಬ್ಬೇಡಿ ಗಂಡ ರಾಜಿಗ ಚೋಳಮನೋ
ಭಂಗಂ ಶ್ರೀಮತ್ರಿಭುವನ -

೯. ಮಲ್ಲದೇವ ಪಾದಾಬ್ಜ ಭೃಂಗಂ ನಾಮಾದಿ ಪ್ರಶಸ್ತಿ ಸಹಿತಂ
ಶ್ರೀ ಮದ್ಯಣ -

೧೦. ಮಣ್ಡಳೇಶ್ವರಂ ತ್ರಿಭುವನ ಮಲ್ಲ ಪಾಣ್ಡ್ಯದೇವರು ನೊಳಂಬ
ವಾಡಿ ಮೂವತ್ತೆರ್ಛಾಸಿರ-~~ಮುಮಂ ದುಷ್ಟ~~

೧೧. ಮುಮಂ ದುಷ್ಟನಿಗ್ರಹ ಶಿಷ್ಟ ಪ್ರತಿಪಾಳನದಿಂ ಭೋಮಬನ
ನೆಲೆವೀಡಿನೊಳ್ಸುಖಸಂ

೧೨. ಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರೆ॥ ಸ್ವಸ್ತಿ ಸಮಧಿಗತ
ಪಂಚಮಹಾಶಬ್ದ ಮ -

## ವೀರಭದ್ರ ದೇವಾಲಯದಲ್ಲಿನ ವೀರಭದ್ರ ಶಿಲ್ಪದ ಹಿಂಬದಿಯಲ್ಲಿ



೧ ಶ್ರೀ ನಮಸ್ತುಂಗ . . . . . . . . ಸ್ತಂಭಾಯ ಸಂಭವೇ
೨ ಸ್ವಸ್ತಿ ಸಮಸ್ತ ಜ . . . . . . . ಜ ಪರನೋಳ್ವರ ಪ-
೩ ರಮ ಭಟ್ಟಾರ . . . . . . . . . . . . ವ ದ್ಯುಮಣಿ-
೪ ಸಮ್ಯಕ್ತ ಭೂಷ . . . . . . . . . . . ರುಸುರನೇಕಾಂ-
೫ ಗವೀರ ಸನಿ . . . . . . . . . . ಪಟಕ್ರಸಾರ್ತಿ ಹೊ-
೬ ಯ್ಸಳ ಭುಜ . . . . . . . . . . . . ಜ್ಯಂಗೆಯುತ್ತ-
೭ ಮಿರೆ ಸಕ . . . . . . . . . ರ ಮೆತಿಪಾತ
೮ ಸಂಕ್ರಮಣದಂ . . . . . . . . (ಯ್ಸು) ಪರಮ ವಿಜ್ಞಾ-
೯ ಸಿ ಬಾಹತ್ತ ನಿ . . . . . . ಉಗಯೋಗಂ ದ-
೧೧ ೦ತಂ ಪಡಿಕಾಯ[೯] . . . . . . . . ಶ್ರೀಪಾದ ಆರಾ-
೧೧ ದಕರು ಮುಷ್ಠ, . . . . . . . ಲಟಲ ಕೋಮಲ
೧೨ ತೊಂಡಲಗ . . . . . . . . ಚ್ಯುತನ ಸಬ-
೧೩ ಲೆ ಹೊಯ್ಸ . . . . . . . . ಬಣ್ಣರಿ ಮ-
೧೪ ಬಡೆಲ್ . . . . . . . . . . ವ ಎಟ್ಯ-
೧೫ ತದಣ್ಣ ನಾ . . . . . . . . . ಸೌನಾಧ
೧೬ . . . . . . . . . . . ರಿಸುಟಕಲ
೧೭ ಸ ಕುಂಕ . . . . . . . . . . . ಮನೆರಂ-
೧೮ ಜನಸ್ವಷ್ಠ, . . . . . . . . . ಗ ಸ್ವರಿತಜ
೧೯ ಕೆಱೆಯ . . . . . . . . . ತಿಪ್ಪಕನ ಕೆಱೆಯ
೨೦ . . . . . . . . . . . . . . . ವಿನೋ-
೨೧ ದದಿ ರಾಜ್ಯ . . . . . . . . ಮಾಡುವಲ್ಲಿ
೨೨ ಪಯಿ . . . . . . . . . . ಮಟ್ಟನಾ-
೨೩ ಗಿ ಭಟ್ಟದಲ್ಯೊ . . . . . . . [ಮ]ಬಾರಿಂಬ-
೨೪ ಡಗ . . . . . . . . . . . . . . ಗೆಱೆಯಂ-
೨೫ ರಿನ್ನತ್ತೊ . . . . . . . . . . . ಶಿವ ಕವಿಲೆಯ-
೨೬ ಕೊಡು . . . . . . . . . . ಸಾರ್ಥನಗ ನಾ-
೨೭ ನಂ ಗಿಂ . . . . . . . . . . ಸಿಕರ ೧ ವಿ
೨೮ . . ವ . . . . . . . . . ರದತ್ತಂ ವಾ-
೨೯ ~~ತ್ರೀಪರ~~ . . . . . ಸ್ವಕ್ಕೆ-
೩೦ ವಿಷ್ಣ . . . . . . . . ಶ್ವಗದೇವರ
೩೧ ತೋ . . . . . . . . . . . . . ೮೦
೩೨ ಥ . . . . . . . . . . ಎರಡು

## ನಾಗೇಶ್ವರ ದೇವಾಲಯದ ಮುಂದಿನ ವೀರಗಲ್ಲು.

ಮೊದಲ ಪಟ್ಟಿ

೧ . . . ವರ್ಷ ೧೨೦೭ ಪಾರ್ಥಿವ ಸಂವತ್ಸರದ ಜೇಷ್ಠ ಸು ೧೦ ಸೋ
೨ . . ಲೂ ಶ್ರೀಮತು ದುರ್ಗಾಧಿಪತಿ ಪ್ರೌಢ . . .
೩ . . . ಚಿಕೊಡೆಯ ಬೇಡರು ಮುತ್ತಿ ಕಾದುತ . . .

ಎರಡನೇ ಪಟ್ಟಿ

೪ . . . [ಶ್ರೀ] ಮತು ಸಂಗಮದೇವರ ದಿವ್ಯ ಶ್ರೀಪಾದಪದ್ಮ ರಾ
೫ . . . ನೊಪ್ಪದ ಸಪ್ತೋನಾಯಕರಿಗೆ ಬೊಂಡದೇವ

(ಮುಂದಿನ ಭಾಗ ಒಡೆದಿದೆ)

[illegible] ಅದೇ ದೇವಾಲಯದ ಮುಂದೆ ಮುರಿದು ಬಿದ್ದಿರುವ ಶಾಸನದ ತುಂಡು

೧ ಪರಧರ್ಮ . . . . . . . . . .
೨ ವಿಶ್ರೆಯುಮಂ . . ಸಾಸಿರ್ವರು ಬ್ರಾಹ್ಮಣರುಮಂ . .
೩ ಕಮಿಗಸಂ ಪ್ರತಿಷ್ಠೆಗೆಯ್ದ ಪದ . . ಆಚಸೂವಮನೋಳ್ಪನೆರದಾವನಂ . . . ಸಾಸಿರ
ಕವಿಲೆಯುಮಂ ಸಾಸಿರ್ವರ್ಬ್ರಾಹ್ಮಣರು ಸಾಸಿರ
೪ . . . . . . . . . . ಪಷ್ಟಿವರಿಶ ಸಹಸ್ರಾಣಿ ವಿಷ್ಟಾಯ ಜಾಯತೇ ಕ್ರಿಮಿ
೫ ರ ಧರ್ಮ . . . . . . . . . . . . . . ಯನಪ್ಪ ಕಿಷ್ಟ . . .
೬ ನಂದ್ಯ ಹಾಪ್ತನ ಶಿಷ್ಟ ವಿ ಸೆಳಿ ದೇವಿಯವರು ಕಟಿ
೭ . . ರ ॥ ಕಾಳಸೋವಿದ್ಯರ ಮಾದೋಜ ಬಿಸಂಗಿ
೮ ಯ್ಲಾ ॥

(ಶಾಸನದ ಕೆಳಗೆ ಉದ್ದವಾಗಿ ಬರೆದಿರುವುದು)

೯ ಸ್ವಸ್ತಿ ಸಮಸ್ತ ಭುವನಾ

ಅದೇ ಗ್ರಾಮದ ಕೋಟೆಯಲ್ಲಿನ ಬಾವಿಯ ಬಳಿ ಬಿದ್ದಿರುವ ಶಾಸನ ಕಲ್ಲಿನ ತುಂಡು

This undated A.D.12 century inscription starts with an invocation.

೧ . . . . . . ಚಂದ್ರಚಾಮರ ಚಾರವೇ ತ್ರೈಲೋಕ್ಯನ . . .
೨ . . . . . . . ಸ್ವಸ್ತಿ ಸಮಸ್ತ ಭುವನಾಶ್ರಯ . . . .
೩ . . . . . . ತರ ಪರಮ ಭ . . . . . .
೪ . . . . . . ಮ ಶ್ರೀ . . . . . . .

(ಕಲ್ಲು ಒಡೆದಿದೆ)

ಮೇಲಿನ ಕೋಟೆಯ ಬಟ್ಟಲು ಬಾವಿಯ ಬಳಿಯ ಬಂಡೆಯಲ್ಲಿನ ಶಾಸನ.

೧ ಸ್ವಸ್ತಿ ಶ್ರೀ ವಿಜಯ[ಪಾ]-
೨ ಣ್ಡ್ಯ ದೇವರವಿಜಯಾಭ್ಯು-
೩ ದೆಯ ನರಸಿ(೦)ಹ ದೇ-
೪ ವರ್ಗ್ಗೆ ಕಿಂಗೆಱೆ ಕೆಳಗೆ ಸ-
೫ ತ ಮೂಡಣ ಹೊಲೆಯರು
೬ ನೀರುಂಬ ಮೂಡರಗೆತನ ಕೆ-
೭ ಱೆಯ ಕೆಳಗೆ ನೀರ್ಮ್ಮಣ್ಣ ನಿ-
೮ ತುಂಬನಿತು ಎರಡು ಕೊಡಿ-
೯ ಯಲು ಹರು ಮತ್ತರು ಬೆ-
೧೦ ದ್ದಲೆಯುಂ ಸರ್ವ್ವಜಿತು ಸಂವ-
೧೧ ತ್ಸರದ ಉತ್ತರಾಯಣ ಸಂ-
೧೨ ಕ್ರಾನ್ತಿಯಲು ಧಾರಾಪೂರ್ವಕ
೧೩ ಮಾಡಿ ಬಿಟ್ಟ ದತ್ತಿ ಚಂದ್ರಾರ್ಕ-
೧೪ ತಾರಂಬರಂ

## ಉಚ್ಚಂಗೆಲ್ಲಮ್ಮನ ಗುಡಿಯ ನವರಂಗದಲ್ಲಿನ ಎಡಭಾಗದ ಘಂಟೆಯ ಸೂತ್ರ.

೧ ಶ್ರೀ ॥ ಸ್ವಸ್ತಿ ಶ್ರೀ ॥ ಶಾಲಿವಾಹನ ಶಕವರುಷ ೧೬೩೦ ನೇ ಸಾವಿರದ
೨ ಆರುನೂರ ಮೂವತ್ತನೆಯ । ಸರ್ವಧಾರಿ/ನಾಮ ಸಂವತ್ಸರದ \
೩ ಮಾಘ ಶುದ್ಧ ೧೫ ಪೌರ್ಣಮಿ ಮಘ ನಕ್ಷತ್ರದಲ್ಲಿ ಶ್ರೀಸ್ವಾಮಿ

೪ ಉಚ್ಚಂಗಮ್ಮಗೆ । ಬಾಗಳಿ ಮುಂಮಡಿ ಬಸಪ್ಪ ನಾಯಕರು
೫ ಸಮರ್ಪಿಸಿದ ಘಂಟೆ ೧ ಕ್ಕೆ ತೂ.ಮ ೧ ಸೇ ೧ ನಾಲ್ವತ್ತವಂದು ಸೇರು

## ಬಲಭಾಗದಲ್ಲಿನ ದೊಡ್ಡ ಘಂಟೆಯ ಸೂತ್ರ.

೧ ವಿಜಯ ಸಂವತ್ಸರದ ಆಶ್ವಿಜ ಬ ೧೨ ಲ್ಲು ಉಚ್ಚಂಗಿಯಮ್ಮನವರಿಗಾದಿನಾಯಕರ
ಕಾಲದಲ್ಲಿ ಅವರ ಪುಣ್ಯ ಸ್ತ್ರೀ ಹೊನ್ನನಾಗತ್ತಿ ಉಚ್ಚಂಗವನವರ ವಾಲಗಕ್ಕೆ
ಗಂಟೆ ಮಾಡಿಸಿಯಿರಲಾಗಿ ಭಿನ್ನವಾಗಲಾಗಿ ಆ ಕುಮಾರ ರಂಗರಾಜ
೨ ನಾಯಕರು । ಆ ಕುಮಾರ ಬಸಪ್ಪ ನಾಯಕರು । ಆ ಕುಮಾರ ಇಮ್ಮಡಿ ಬಸವಪ್ಪ
ನಾಯಕರು ಹಾಸ್ತಾ ಉಚ್ಚಂಗಿಯಮನ ವಾಲಗಕೆ ಛೊಕಸ್ತ ಕೋನ್ನೆಯ ಮುಕುತ್ತಿ
ಮಾಡಿಸಿದ್ದು ಯಿ ಗಂಟೆ ಬಿನ್ನವಾಗಲಾಗಿ ಆ ಕು-
೩ ಮಾರ ಮುಂಮಡಿ ಬಸವಪ್ಪ ನಾಯಕರ ಕುಮಾರ ಮುಂಮಡಿ ಬಸಪ್ಪ ನಾಯಕರು
ಅವನವರ ವಾಲಗಕೆ ವಿಕ್ರಮ ಸಂವತ್ಸರದ ವೈಸಖ ಶು ೫ ಲು ಕುಮಾರ
ಬಗುಟ್ಟಿರ ಸಿವನಪ್ಪನ ಮುಖಾಂತರ ಮಾಡಿದನ್ನ ಗಂಟ್ಯೆಯ ಗಂಟ್ಯೆ ಮಾ-
೪ ಡಿದಾತ್ತ ಕಂಚಗಾರಗವಾಡ್ರ ದಂಡಪ್ಪನ ಮಗ ನಾಗಪ್ಪ । ಯಿಲ್ಲ ಕಿತ್ತಾಡ ಕಿತ್ತಿದಾತ ।
ಗಾಳಿ *ಶಿನ ಆರ್ಕಸಾಲೆರ ಮುದಿಯಪ್ಪನ ಮಗ ಕಲಿಯಪ್ಪನು ದುರ್ಗ ಪರಮೇಶ್ವರಿ
ನಿಂಮ ಶ್ರೀಪಾದವೇ ಗತ್ತಿ । *ಮಾಗಡಿಯ ಯಲ್ಲಪ್ಪನ ಮೊಖಾಂತರ ಯಿ ಗಂಟ್ಯೆ
ಆಯಿತು

## ೬ನೇ ದೇವಾಲಯದ ಮೇಲೆ ಕಲ್ಲಿನ ಶಿಖರದ ಬಳಿಯಲ್ಲಿ

೧ ಶಾಲಿವಾಹನ ಸಖ ವರುಷ ೧೪೭ ನೆಯ ನಂದನ ಸಂ . . . .
೨ ದ ಕಾರ್ತಿಕ ಶು . ಮಂ ವೃಚಂಗಿಯ ಸೇನಬೋವಲಿ . . . .
೩ ಬಾಕ . ಗಯ (ತ)ರಸ ಸಮರ್ಪಿಸಿ . . . ವನಾವನ . . . . .
೪ ಗೆಯ . ವದಿ ಕಿತೋಜನ ಮೊಂಮಕಳು ಹೊ . (ಸಿ) . . . .
೫ ಶು . . . . ಬಿ ಜನಲಿ ಮಾಡಿದರು

## ೬ನೇ ದೇವಾಲಯದ ಎದುರಿಗಿರುವ ಸಿಬಾರ ಕಂಬದಲ್ಲಿ

೧ ವಿರೋಧಿ ಸಂವತ್ಸರದ ಜೇಷ್ಟ ಬ ೧೦ ವಡ್ಡವಾರದಲು
೨ ಶ್ರೀಮನುಮಹಾಮಂಡಲೇಸ್ವರ ಶ್ರೀವೀರ/ಹಿಂಪೆಯ್ಯ/ರಾ-
೩ ಯರ ತರುವಕಳ ಬಲಳನು ಏಕನಾಥ ದೇವತೆಗೆ ಮಾಡಿಸಿ-
೪ ದ ಸಿಬಾರವನು ಮಾಡಿಸಿ ಪ್ರದಿಷ್ಟೆಯನು ಮಾ[ಡಿ]ಸಿದ . ೧
೫ ಆ ಪ್ರದಿಷ್ಟೆಉ ಚಂದ್ರ ಸೂರ್ಯ ಆ ಚಂದ್ರಾರ್ಕತಾರವ್ರು ನಡ-
೬ . ಯಿ ಧರ್ಮವ . . . . . ಯರ ಧರ್ಮ್ಮವ್ರ ಮಂ
೭ ಗಳ ಮಹಾಶ್ರೀ ಶ್ರೀ ಶ್ರೀ

